ಉಪನ್ಯಾಸ ಗ್ರಂಥಮಾಲೆ
೩೮೮

# ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ

ಎನ್. ಆರ್. ನಾಯಕ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಅಕ್ಟೋಬರ, ೧೯೮೯

ಉಪನ್ಯಾಸ ಗ್ರಂಥಮಾಲೆ

೩೮೮

# ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ

ಎನ್. ಆರ್. ನಾಯಕ




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಅಕ್ಟೋಬರ, ೧೯೮೪



ಪ್ರಕಾಶಕರು:

ಎಸ್. ಬಿ. ನಾಯಕ
ನಿರ್ದೇಶಕರು
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಅಕ್ಟೋಬರ, ೧೯೮೯
೫೦೦೦ ಪ್ರತಿಗಳು



ಬೆಲೆ : ರೂ. ೧=೦೦

ಮುದ್ರಕರು :

ಜಿ. ಬಿ. ಮನ್ನಾಚಾರ
ಕಾರ್ಯನಿರ್ವಾಹಕ ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕೂ ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೮೭ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು - ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜಿ. ಕೆ. ನಾರಾಯಣ ರೆಡ್ಡಿ
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗದವರ ಕೋರಿಕೆಯ ಮೇರೆಗೆ ದಿ. ೮–೨–೧೯೮೭ ರಂದು ಉತ್ತರ ಕನ್ನಡ ಜಿಲ್ಲೆಯ ಬಂಕಿಕೊಡ್ಲದಲ್ಲಿ ನಾನು "ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ" ಎಂಬ ವಿಷಯವನ್ನು ಕುರಿತು ಉಪನ್ಯಾಸವನ್ನು ನೀಡಿದ್ದೆ. ಆ ಉಪನ್ಯಾಸವನ್ನು ಕೆಲವೆಡೆ ಸಂಕ್ಷೇಪಿಸಿ ಮತ್ತೆ ಕೆಲವೆಡೆ ವಿಸ್ತರಿಸಿ ಈ ಪುಟ್ಟ ಹೊತ್ತಗೆಯನ್ನು ರಚಿಸಲಾಗಿದೆ. ಈ ಹೊತ್ತಗೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಕನ್ನಡ ಮಾತನ್ನಾಡುವ, ಒಂದೇ ಬುಡಕಟ್ಟಿಗೆ ಸೇರಿದ ನಾಲ್ಕು ಪಂಗಡಗಳ ಜಾನಪದವನ್ನು ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದೇನೆ ಬುಡಕಟ್ಟು ಜನಾಂಗಕ್ಕೆ ಸೇರಿದ ಸಿದ್ದಿ ಮತ್ತು ಕುಮರಿ ಮರಾಠಿಗಳ ಜಾನಪದವನ್ನು ಕುರಿತು ಇಲ್ಲಿ ಚರ್ಚಿಸಿಲ್ಲ. ಯಾಕಂದರೆ ಅವರು ಶುದ್ಧ ಕನ್ನಡ ಮಾತಾಡುವ ಬುಡಕಟ್ಟುಗಳಿಗೆ ಸೇರಿಲ್ಲ. ಅಚ್ಚಕನ್ನಡಿಗರಾದ ಒಕ್ಕಲಿಗ ಬುಡಕಟ್ಟುಗಳ ಜಾನಪದದ ಇಣುಕು ನೋಟವನ್ನು ಈ ಕಿರುಹೊತ್ತಗೆಯಲ್ಲಿ ಕಾಣಬಹುದು. ಈ ಹೊತ್ತಗೆಯು ಈ ಜನಾಂಗಗಳ ಸಮಗ್ರ ಅಧ್ಯಯನ ಮಾಡುವವರಿಗೆ, ಒಂದು ದಾರಿ ದೀಪವಾದಲ್ಲಿ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ಈ ಗ್ರಂಥ ರಚನೆಗೆ ಬೇಕಾಗುವ ಸಾಮಗ್ರಿಗಳನ್ನು ಸಂಗ್ರಹಿಸುವ ಕಾಲಕ್ಕೆ ನನಗೆ ನೆರವಿತ್ತ ಪ್ರೊ. ಜಮೀರುಲ್ಲಾ ಶರೀಫ್,

ಪ್ರೊ. ಪಿ. ಡಿ. ನಾಯಕ, ಡಾ. ರಾಜೇಂದ್ರ ತೆಂಗಿನಗುಂಡಿ, ಶ್ರೀ ಎಸ್. ವಿ. ನಾಯಕ, ಫಾರೆಸ್ಟರ್, ಹಾಡುವಳ್ಳಿ, ಸೋಮಯ್ಯ ಸಣ್ಣು ಗೊಂಡ ಕುಂಟವಾಣಿ ಹಾಗೂ ಜಾನಪದ ಸಾಮಗ್ರಿಯನ್ನು ಒದಗಿಸಿದ ಮಹನೀಯರಿಗೆ ಮತ್ತು ಮಹಿಳೆಯರಿಗೆ ಹಾಗೂ ಈ ಕಿರು ಹೊತ್ತಗೆಯ ಪ್ರಕಟನೆಗೆ ವಿಶೇಷ ಕಾಳಜಿ ವಹಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರಿಗೆ ಕೃತಜ್ಞನಾಗಿದ್ದೇನೆ.

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ
ಕಾಲೇಜು, ಹೊನ್ನಾವರ, (ಉ. ಕ.)

**ಎನ್. ಆರ್. ನಾಯಕ**

# ಪರಿವಿಡಿ


ಮುನ್ನುಡಿ iii

ಅರಿಕೆ v

೧. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳು ೧

೨. ಸಮಾಜ ವ್ಯವಸ್ಥೆ, ಸಂಪ್ರದಾಯ ನಂಬಿಕೆ ಮತ್ತು ವೈದ್ಯ ೧೬

೩. ಧಾರ್ಮಿಕ ಆಚರಣೆ, ಕಲೆ ಮತ್ತು ಕ್ರೀಡೆಗಳು ೩೭

೪. ಸಾಹಿತ್ಯ ೬೨

ಗ್ರಂಥಋಣ ೭೮

೧

# ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳು

## ೧. ಉತ್ತರ ಕನ್ನಡದ ಮೂಲನಿವಾಸಿಗಳು :

ಉತ್ತರ ಕನ್ನಡ ಜಿಲ್ಲೆಯು ಗುಡ್ಡ ಬೆಟ್ಟಗಳು ಹಾಗು ಸಮುದ್ರ ಕಿನಾರೆಗಳಿಂದ ಕೂಡಿದ ಹಚ್ಚ ಹಸುರಿನ ಬೀಡು. ಬ್ರಾಹ್ಮಣರಿಂದ ವಂಚಿತನಾದ ಪರಶುರಾಮನು ಸಮುದ್ರನಾಥ ನನ್ನು ಪ್ರಾರ್ಥಿಸಿ, ಈ ಪ್ರದೇಶವನ್ನು ಪಡೆದನೆಂದು ಐತಿಹ್ಯ ವಿದೆ. ಈ ಐತಿಹ್ಯದ ಸತ್ಯಾಸತ್ಯತೆಯೇನೇ ಇರಲಿ, ಒಂದು ಮಾತಂತೂ ಸತ್ಯ– ಈ ಪ್ರದೇಶವು ಸಮುದ್ರದಿಂದ ಕೊಂಡ ಪ್ರದೇಶ–(ಕೋಳ್ + ಕಣ) ಎಂದರೆ ಸಮುದ್ರ 'ಹೊರೆದು' ತಯಾರಾದ ಸ್ಥಳ. ಕ್ರಮೇಣ ಇಲ್ಲಿಗೆ ವಿಭಿನ್ನ ಸಂಸ್ಕೃತಿಯ ಜನರು ವಲಸೆಬಂದು, ತಮ್ಮ ಸಾಂಸ್ಕೃತಿಕ ಬದುಕನ್ನು ದಾಖಲಿಸಿದರು.

ಆದಿಯಲ್ಲಿ ಅಬ್ರಾಹ್ಮಣರೇ ನೆಲೆಸಿರಬಹುದಾದ, (ಯಾಕಂದರೆ ಒಮ್ಮೆ ಬ್ರಾಹ್ಮಣರಿಂದ ಮೋಸಹೋದ ಪರಶು ರಾಮನು ಮತ್ತೆ ತನ್ನ ಜೀವಿತ ಕಾಲದಲ್ಲಿ ಇಲ್ಲಿ ಬ್ರಾಹ್ಮಣ ಪ್ರವೇಶಕ್ಕೆ ಅನುಮೋದಿಸಿರಲಾರ) ಈ ಭೂ ಭಾಗದಲ್ಲಿ ಆಮೇಲೆ ಕ್ರಮೇಣ ಬ್ರಾಹ್ಮಣರು ಬಂದು ನೆಲೆಸಿದರು, ಎನ್ನುವುದನ್ನು ಸಮರ್ಥಿಸುವ ಐತಿಹ್ಯಗಳಿವೆ. ಬಹುಶಃ ಉತ್ತರ ಕನ್ನಡ ಜಿಲ್ಲೆಯ ಮೂಲ ನಿವಾಸಿಗಳು ಹೊಲೆಯರು. ಇದನ್ನು ಕೆಳಗಿನ ನಿದರ್ಶನಗಳಿಂದ ರುಜುವಾತು ಪಡಿಸಬಹುದು :

ಅ. ಗುಮಟೆಯ ಪದವೊಂದರಲ್ಲಿ. ಸಮುದ್ರದ ಜೇಲಿಯ ಮೇಲೆ ಭೂಮಿಯನ್ನು ಪಡೆದು, ತಪಸ್ಸನ್ನು ಮಾಡುವ ಹೊಲತಿಯ ಕಾರಣದಿಂದಾಗಿ, ಮಾದೇವರಾಯನು ಪಡೆದ ಭೂಮಿಯು ಗಟ್ಟಿಯಾಗದೆ ಆತ ಅವಳನ್ನು ಕೊಲ್ಲಿಸಿ, ಅವಳ ಅಂಗಾಂಗದ ಒಂದೊಂದು ಭಾಗದಿಂದ, ಒಂದೊಂದು ಜಾತಿಯನ್ನು ಪಡೆದ ವಿವರಣೆಯಿದೆ.[೧] ಇಲ್ಲಿಯ ಕಡಲ ದಂಡೆಯ ಮೇಲೆ ನೆಲೆಯೂರಲು ಬಂದ ವಲಸಿಗರಿಗೆ ಅಭದ್ರತೆಯನ್ನೊದಗಿಸುವ ಹೊಲೆಯರನ್ನು ಮಾದೇವರಾಯನು ಸಂಹಾರಮಾಡಿ ಉಳಿದ ಜನಾಂಗಗಳಿಗೆ ಭದ್ರ ನೆಲೆಯನ್ನೊದಗಿಸಿದಂತಿದೆ.

ಆ. ಇಲ್ಲಿ ಹರಿಜನರು ಪೂಜಾರಿಗಳಾಗಿರುವ ಅನೇಕ 'ಹೊಲೆಯಟ್ರ' ದೇವಸ್ಥಾನಗಳಿವೆ. ಸದ್ಗುಣಿಯಾದ ಹೊಲೆಯ ಭಟನೊಬ್ಬನು ತೀರಿಹೋದಮೇಲೆ, ಆತನು 'ಹೊಲೆಯಟ'ನೆಂದು ಪೂಜೆಗೊಂಡಿರಬೇಕು. ಈ ಬಗೆಯ ವೀರಪೂಜೆ ಕರಾವಳಿಯಲ್ಲಿ ಸಹಜವಾಗಿದೆ :

ಬೇಡರೆಲ್ಲಾ ಕೂಡೇ ಬೇಡಿದ್ರೇ ಈ ರಾಜ್ಯ
ಸೇಡಿ ನೀರೊಂಡ ಹೊಲಿಯಟ್ಟ । ಜೇನೊಡಿಯಾರ
ಬ್ಯಾಡರಿಗ್ ಇಂಬಾ ಕೊಡ್ಸೆಂದ್ರ ॥

ಬೇಡರ ಆಕ್ರಮಣವನ್ನೆದುರಿಸಲು ಜೈನ ವೀರನೊಬ್ಬನಿಗೆ ಸಹಾಯವನ್ನು ಸಲ್ಲಿಸಿ, ಬವಣೆಪಟ್ಟ 'ಹೊಲೆಯಟ್ಟ'ನ ಚಿತ್ರ

---

೧. ಡಾ। ಎನ್. ಆರ್. ನಾಯಕ, ಸುಗ್ಗಿಯ ಪದಗಳು (೧೯೬೭) ಪುಟ ೫೪ ರಿಂದ ೫೮ ನೋಡು.

ವಿಲ್ಲಿದೆ. ಬೇಡರು ಇಲ್ಲಿಗೆ ಬರುವ ಪೂರ್ವದಲ್ಲಿ ಹೊಲೆಯರು, ಜೈನರು ಇಲ್ಲಿ ನೆಲೆಸಿದ್ದರೆನ್ನುವುದನ್ನು ಮೇಲಿನ ಹಾಡು ಸ್ಪಷ್ಟ ಪಡಿಸುತ್ತದೆ.

ಇ. ಡಾ. ಬುಕಾನನ್ನನು ಈ ಜಿಲ್ಲೆಯಲ್ಲಿ ಹೊಲೆಯರು (ಪಲಿಯರು) ರಾಜಸತ್ತೆಯಲ್ಲಿದ್ದುದನ್ನು ವಿಶದಪಡಿಸಿದ್ದಾನೆ.[೨]

ಈ. ಹೊಲೆಯರು ಆಗಾಗ ವೇಷಬದಲಿಸಿಕೊಂಡು ಇಲ್ಲಿಯ ಮೇಲ್ಜಾತಿಯವರ ಮನೆಗೆ ಹೆಣ್ಣುಕೇಳಲು ಬರುವ, ಒಮ್ಮೊಮ್ಮೆ ಮೋಸದಿಂದ ಅವರ ಹೆಣ್ಣನ್ನು ಮದುವೆಯಾದ ಕತೆಗಳು ಸಿಗುತ್ತವೆ.

ಈ ಸಂಗತಿಗಳು ಒಂದು ಕಾಲಕ್ಕೆ ಇಲ್ಲಿಯ ಮೂಲನಿವಾಸಿಗಳಾದ ಹೊಲೆಯರು, ಅನಂತರ ಬಂದವರಿಂದ ಕ್ರಮೇಣ ತಮ್ಮ ಭದ್ರ ನೆಲೆಗಳನ್ನು ಕಳೆದುಕೊಂಡುದನ್ನು ಖಚಿತಪಡಿಸುತ್ತವೆ. ಹೊಲೆಯರ ನಂತರ ಜೈನರು, ನಾಡವರು, ಬುಡಕಟ್ಟು ಜನಾಂಗದ ಒಕ್ಕಲಿಗರು, ನಾಮಧಾರಿಗಳು, ಕೊಮಾರ ಪಂತರು, ಬ್ರಾಹ್ಮಣರು ಹೀಗೆ ಒಬ್ಬೊಬ್ಬರಾಗಿ ಇಲ್ಲಿಗೆ ಬಂದು ನೆಲೆಸಿದರು.

## ೨. ಬುಡಕಟ್ಟು ಜನಾಂಗಗಳು :

ಮಾನವ ಸಂಸ್ಕೃತಿಯಲ್ಲಿ ಮೂರು ಪಂತಗಳನ್ನು ಗುರುತಿಸಲಾಗುತ್ತದೆ: ಅ. ಆದಿವಾಸಿ ಸಂಸ್ಕೃತಿ, ಆ. ಗ್ರಾಮ್ಯಸಂಸ್ಕೃತಿ,

---

೨. Dr. F, Buchanan : Journey through the Northern Parts of Kanara (Ed, by S. Silva) (1956) P. 38.

೩. ನಗರ ಸಂಸ್ಕೃತಿ. ಮಾನವ ಗುಂಪುಗಳು ಮೂಲತಃ ಸಮತಟ್ಟು ನೆಲದ ವಾಸಿಗಳು. ತಮ್ಮ ಮೂಲ ಗುಂಪುಗಳಿಗಿಂತ, ಆಯುಧ ಹಾಗು ತಂತ್ರದಲ್ಲಿ ಪ್ರಬಲರಾದವರ ಆಕ್ರಮಣಕ್ಕೆ ಹೆದರಿ, ಸೋತ ಮೂಲ ನಿವಾಸಿಗಳು ಗುಡ್ಡಗಾಡಿನತ್ತ ನಡೆದರು. ಮುಂದೆ ಗುಡ್ಡಗಾಡಿನ ಆಪಾಯಕಾರಿ ವಾತಾವರಣದಿಂದ ಕೆಲವರು ನಾಶವಾದರು. ಮತ್ತೆ ಕೆಲವರು ಹತ್ತಿರದ ಗ್ರಾಮಗಳಿಗೆ ಬಂದು, ಗ್ರಾಮಗಳ ಎಲ್ಲೆಯಲ್ಲಿ ನೆಲೆಸಿ, ಆನಂತರ ಜಾತಿಗಳೂ ಆದರು. ಕಾಲಕ್ರಮದಲ್ಲಿ ಇವರು ನಗರವಾಸಿಗಳೂ ಆದರು. ಹೀಗೆ ಪ್ರಪಂಚದಲ್ಲಿ ಆದಿವಾಸಿ, ಗ್ರಾಮೀಣ ಹಾಗು ನಗರ ಸಂಸ್ಕೃತಿಯ ಹುಟ್ಟುಬೆಳವಣಿಗೆಯ ಮಜಲುಗಳನ್ನು ಗುರುತಿಸಬಹುದು. ಈ ಸಂಸ್ಕೃತಿಯ ಒಡಲಲ್ಲೇ ಬುಡಕಟ್ಟು ಸಂಸ್ಕೃತಿಯ ಒಳಸುಳಿಯೂ ಇದೆ.

ಗತಿಶೀಲವಾದ ಸಂಸ್ಕೃತಿ ಪ್ರವಾಹದ ಗತಿಗಮನಗಳನ್ನರಿಯಬೇಕಾದರೆ, ಬುಡಕಟ್ಟು ಸಂಸ್ಕೃತಿಯ ಅಧ್ಯಯನವೂ ಅತ್ಯಗತ್ಯವಾಗುತ್ತದೆ. ಶತಶತಮಾನಗಳಿಂದ ಗುಡ್ಡಗಾಡು, ದ್ವೀಪ, ಹಿಮಪ್ರದೇಶಗಳಲ್ಲಿದ್ದು, ಗ್ರಾಮನಗರಗಳ ಸಂಸ್ಕೃತಿಯ ಪ್ರಭಾವಕ್ಕೊಳಗಾಗದೆ, ತಮ್ಮ ಸಂಸ್ಕೃತಿಯ ಪ್ರತ್ಯೇಕತೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವ ಜನವರ್ಗಗಳೇ ಬುಡಕಟ್ಟು ವರ್ಗಗಳು, ಈ ಜನ ತಮ್ಮದೇ ಆದ ಪ್ರತ್ಯೇಕ ಸಾಮಾಜಿಕ ಉಪಭಾಷೆ, ಆಚಾರ, ವಿಚಾರ, ಸಾಹಿತ್ಯಗಳನ್ನು ಹೊಂದಿರುತ್ತಾರೆ. ಬುಡಕಟ್ಟು ಲಕ್ಷಣವನ್ನು ಹಾಲಕ್ಕಿ ಒಕ್ಕಲಿಗರ ಗುಮಟೆಯ ಪದವೊಂದು ಚೆನ್ನಾಗಿ ವಿವರಿಸುತ್ತದೆ :

ಶೆಣ್ಣಾ ಶೆಣ್ಣಾ ಹಪೋ ಬಾಲಿಕರೋ
ಇದ್ಯ ತೆಳಿಯಾ ಬುದ್ದೀ ತೆಳಿಯಾವೋ
. . . . . . . . . . . . . . . . . . . . . . . . . . . . . . . . . . .
ನಾಮೋ ಚಾರಿನಲ್ಲಿ ಹುಟ್ಟೋರಲ್ಲಾವೋ
ನಾಮೋ ಓದು ಬರವ ಕಲ್ತೋರಲ್ಲಾವೋ
ನಾಮೋ ಮುಂಗುಲಿಕೂಡೇಲಾಡೇ ಉಳಿದವರೋ
ನಾಮೋ ಚಾಪೆಕೂಡೆಲಾಡೇ ಉಳಿದವರೋ
ನಾಮೋ ಮುಂಡ್ಕೆ ಚಪೆ ನೀರ್ ಕುಡ್ದವರೋ
ನಾಮೋ ಶಮುದರದಾ ನೀರಾ ಕುಡಿಲೆಲ್ವೋ
ನಾಮೋ ತಾಯಿಯೊಂದು ರಣವಾ ಕುಡಿದವರೋ [೩]

ಬುಡಕಟ್ಟು ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿದೆ ಈ ಹಾಡು. ನಿರಕ್ಷರಿಗಳಾದ ಈ ಜನರೆಡೆ, ನಗರ ನಾಗರಿಕತೆಯ ಗಾಳಿ ಸೋಂಕದು. ಕಾಡಿನ ಮಂಗ, ಮುಂಗುಲಿ, ಚಾಪೆಗಳು ಇವರ ಒಡನಾಡಿಗಳು. ಮುಂಡಕಿಯ ಚಪ್ಪೆ ನೀರಿನಿಂದ ಬೆಳೆದ ಇವರು ಬೋಳೆಯ ಸ್ವಭಾವದವರು. ಶಹರ, ಸಾಗರಗಳ ಕಾಠಿಣ್ಯ, ಕಟುತೆಗಳು ಇವರಲ್ಲಿಲ್ಲ. ಹೀಗಾಗಿ ವ್ಯಾಪಾರಿಗಳು, ರಾಜಕಾರಣಿಗಳು ಮುಂತಾದವರೆಲ್ಲರ ಶೋಷಣೆಗೊಳಗಾಗುತ್ತಾರೆ ತಾಯಿಯ ವೈರಣವನ್ನು ಹೀರಿ ಬೆಳೆದ ಈ ಮುಗ್ಧರು.

ಅಡವಿಯ ಉತ್ಪನ್ನಗಳಾದ ಗಡ್ಡೆಗೆಣಸು, ಹಣ್ಣು ಕಾಯಿ, ಹುಲ್ಲುಸೊಪ್ಪು ಜೇನುತುಪ್ಪ ಮುಂತಾದವುಗಳಿಂದ ಇವರು

---

೩ ಎನ್. ಆರ್. ನಾಯಕ : ಹೇಳುತೇವೋ ಗುಮ್ಟೆ ಪದನಾವಾ (೧೯೮೩) ಪುಟ. ೧

ಜೀವನ ಸಾಗಿಸುತ್ತಾರೆ. ಹಣ ಶೇಖರಣೆಯೆಡೆ ಗಮನಹರಿಸು ವುದಿಲ್ಲ; ಅಂದು ತಂದದ್ದನ್ನು ಅಂದೇ ತಿಂದು ಮುಗಿಸುವ ಪ್ರವೃ ತ್ತಿಯವರು. ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಒಂದೆಡೆ ನಿಂತು ಬೇಸಾಯಮಾಡುವ ಪರಿಸ್ಥಿತಿ ಇವರಿಗೆ ದೊರೆತರೂ, ಒಂದು ಕಾಲಕ್ಕೆ ತಮ್ಮ ಬೇಸಾಯ ಕ್ಷೇತ್ರವನ್ನು ಬದಲಿಸುತ್ತಲೇ ಬಾಳಿದ ಅಲೆಮಾರಿಗಳವರು. ಸ್ತ್ರೀ–ಪುರುಷ ಸಂಬಂಧದಲ್ಲಿ ವಿಶೇಷ ಕಟ್ಟು ಕಟ್ಟಳೆಗಳನ್ನು ಪಾಲಿಸುವುದು ಕಡಿಮೆ; ಆದರೂ ಅವರದೇ ಆದ ಕೆಲವು ವಿಧಿ ನಿಷೇಧಗಳಿವೆಯೆನ್ನುವುದನ್ನು ಮರೆಯುವಂತಿಲ್ಲ. ಇವರು ತಮ್ಮ ಬುಡಕಟ್ಟು ವಲಯದ ಹೊರ ಗಿನವರನ್ನು ಗುಮಾನಿಯಿಂದಲೇ ನೋಡುತ್ತಾರೆ, ಇವರ ವಿಶ್ವಾಸ ವನ್ನು ಸಂಪಾದಿಸಿದರೆ ಏನು ಬೇಕಾದರೂ ಮಾಡುತ್ತಾರೆ. ಅನೇಕ ವರ್ಷಗಳವರೆಗೆ ಇವರು ನಮ್ಮ ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ಪೂರ್ತಿಯಾಗಿ ಬೆರೆಯದೆ, ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆ, ವೈಶಿಷ್ಟ್ಯಗಳನ್ನು ಉಳಿಸಿಕೊಂಡಿದ್ದಾರೆ, ಇದಕ್ಕೆ ಕಾರಣ, ಸಂಪರ್ಕಕ್ಕೆ ಕಷ್ಟಕರವಾದ ಗುಡ್ಡ ಬೆಟ್ಟಗಳ ವಾಸ್ತವ್ಯ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗದವರಲ್ಲಿ ಹಿಂದೂ ಧರ್ಮದ ಹಲವಾರು ಅಂಶಗಳನ್ನು ಗುರುತಿಸಬಹುದಾದರೂ ಅವರು ತಮ್ಮದೇ ಆದ ಭಿನ್ನ ಸಂಸ್ಕೃತಿಯನ್ನೂ ಉಳಿಸಿಕೊಂಡಿದ್ದಾರೆ. ಉಳಿದ ಜಾತಿ ಪಂಗಡಗಳು ಹಿಂದೂ ಧರ್ಮದ ಪ್ರಭುತ್ವದಿಂದ ತಪ್ಪಿಸಿಕೊಳ್ಳಲಾಗದೇ ಅದರಲ್ಲಿ ಕರಗಿ ಹೋಗಿವೆ. ಈಗಿತ್ತಲಾಗಿ ಈ ಬುಡಕಟ್ಟುಗಳೂ, ತಮ್ಮ ಸಾಂಸ್ಕೃತಿಕ ಅಸಲುತನವನ್ನು ಕಳೆದುಕೊಂಡು ಹಿಂದೂ ಧರ್ಮದಲ್ಲಿ ಕರಗುತ್ತಲಿವೆ. ಆದರೂ

ಹುಟ್ಟು, ಸಾವು, ಮದುವೆ ಈ ಮೂರೂ ಸಂದರ್ಭಗಳಲ್ಲಿ ಬ್ರಾಹ್ಮಣರ ಪೌರೋಹಿತ್ಯವನ್ನು ಪಡೆಯದೆ, ತಮ್ಮ ಜಾತಿಯ 'ಮುಖಂಡರಿಗೆ ಪ್ರಾಧಾನ್ಯವನ್ನು ನೀಡಿ, ತಮ್ಮ ಬುಡಕಟ್ಟಿನ ಮೂಲ ಸಾಮಾಜಿಕ, ಧಾರ್ಮಿಕ ಸ್ವರೂಪವನ್ನು ಉಳಿಸಿಕೊಂಡಿದ್ದಾರೆ. ಜೊತೆ ಜೊತೆಗೇ ಉಳಿದ ಹಿಂದುಗಳು ಆಚರಿಸುವ ಹಬ್ಬ ಹರಿದಿನಗಳನ್ನು ಆಚರಿಸುವುದು, ಜಾತ್ರೆ ರಥೋತ್ಸವಗಳಲ್ಲಿ ಬೆರೆಯುವುದು ಅಕ್ಷರಾಭ್ಯಾಸವನ್ನು ಪಡೆಯುವುದು, ಮುಂತಾದ ಚಟುವಟಿಕೆಗಳಿಂದ ಹಂತಹಂತವಾಗಿ ತಮ್ಮ ಬುಡಕಟ್ಟು ಗುಣಧರ್ಮಗಳ ಪೊರೆಗಳನ್ನು ಕಳಚಿಕೊಳ್ಳತೊಡಗಿದ್ದಾರೆ.

ಈ ಜಿಲ್ಲೆಯ ಬುಡಕಟ್ಟುಗಳನ್ನು ಕೆಳಗಿನಂತೆ ವಿಂಗಡಿಸಬಹುದು :

ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳು




ಸಿದ್ದಿ ಬುಡಕಟ್ಟಿನವರು ಹಿಂದೂ ಮುಸಲ್ಮಾನ ಮತ್ತು ಕ್ರಿಶ್ಚನ್ ಈ ಮೂರೂ ಧರ್ಮಗಳ ಸಂಪ್ರದಾಯ ಆಚರಣೆಗಳ ಪ್ರಭಾವಕ್ಕೊಳಗಾಗಿದ್ದಾರೆ. ಅವರ ಭಾಷೆ ಕನ್ನಡವಲ್ಲ, ಕುಮರಿ ಮರಾಠಿಗಳು ಮತ್ತು ಒಕ್ಕಲಿಗರು ಹಿಂದೂ ಧರ್ಮದ ಆಚರಣೆಗಳನ್ನು ರೂಢಿಸಿಕೊಳ್ಳತೊಡಗಿದ್ದಾರೆ. ಕುಮರಿ ಮರಾಠಿಗಳ

ಭಾಷೆ ಮರಾಠಿಗೆ ಹತ್ತಿರವಾಗಿದೆ. ಒಕ್ಕಲಿಗರು ಅಚ್ಚಕನ್ನಡಿಗರು. ಆದ್ದರಿಂದ ನಾನು ನನ್ನ ಉಪನ್ಯಾಸದಲ್ಲಿ ಒಕ್ಕಲಿಗರ ಬುಡಕಟ್ಟನ್ನು ಮಾತ್ರ ಗಮನಿಸಿದ್ದೇನೆ. ಇವರಲ್ಲಿ ಹಾಲಕ್ಕಿ ಒಕ್ಕಲು, ಗೊಂಡ ಒಕ್ಕಲು, ಗಾಮೊಕ್ಕಲು. ಕೊಟ್ಟೆ ಒಕ್ಕಲು. ಕರೆ ಒಕ್ಕಲು[೪] ಎಂಬ ಉಪ ಪಂಗಡಗಳಿವೆ.

## ಅ. ಹಾಲಕ್ಕಿ ಒಕ್ಕಲು :

ಇವರು ಮೈಸೂರು ಸೀಮೆಯು ಕಡೆಯಿಂದ ಕರಾವಳಿಗೆ ಬಂದು ನೆಲಸಿದರೆಂದು ತರ್ಕಿಸಲಾಗುತ್ತದೆ. ಒಕ್ಕಲಿಗರು ಇನ್ನೂ ಮೈಸೂರು ಮಂಡ್ಯ ಕಡೆಗಿದ್ದಾರೆ. ಚರಿತ್ರೆಯಲ್ಲಿ ಯಾವುದೋ ಕಾಲಕ್ಕೆ ಅವರು ತಮ್ಮ ನಾಡನ್ನು ಬಿಟ್ಟು ಹೊರಟರು. ಕೆಲವರು ಕರಾವಳಿಯೆಡೆ ಬಂದರೆ, ಕೆಲವರು ಗುಡ್ಡಗಾಡಿನೆಡೆ ಹೋದರು. ಕರಾವಳಿಗೆ ಬಂದವರು ಮೊದಮೊದಲು ಸಹ್ಯಾದ್ರಿಯ ಇಳುಕಲಿನಗುಂಟ ನೆಲೆಸಿ, ಕುಂಬ್ರಿ ಬೇಸಾಯವನ್ನು ಮಾಡಿದರು. ಕ್ರಮೇಣ ಕರಾವಳಿಯ ಬೈಲಿನೆಡೆಗೂ ಪಸರಿಸಿದರು. ಒಕ್ಕಲುತನಕ್ಕೆ ಪೋಷಕವಾದ ಹಾಲುಹೈನದ (ಪಶು ಸಂಗೋಪನ) ವೃತ್ತಿ[೫] ಹಾಗು ಅಕ್ಕಿಯ ಬೇಸಾಯ ಎರಡನ್ನೂ ರೂಢಿಸಿ

೪ ಉತ್ತರ ಕನ್ನಡ ಜಿಲ್ಲೆಯಲ್ಲಿ ಒಕ್ಕಲಿಗ, ಒಕ್ಕಲು ಎರಡನ್ನೂ ಏಕಾರ್ಥದಲ್ಲಿ ಬಳಸುತ್ತಾರೆ.

೫ ಗೌಡ ಎಂದು ಇವರಿಗಿರುವ ಹೆಸರು ಹೀಗೆ ಸಿದ್ಧಿಸಿರಬಹುದು :

i ಗೋವಳ > ಗವುಳ > ಗವುಡ > ಗೌಂಡ < ಗೊಂಡ / ಗೌಡ

ii ಗ್ರಾಮ + ಮುಂಡ > ಗಾಮುಂಡ > ಗಾವುಂಡ > ಗೌಂಡ > ಗೌಡ; ಗಾಮುಂಡ ಪದ ಎಂಟು ಒಂಭತ್ತನೆಯ ಶತಮಾನದ ಕನ್ನಡ ಶಾಸನಗಳಲ್ಲಿದೆ.

ಕೊಂಡರು. ಹೀಗೆ ಹಾಲು, ಮತ್ತು ಅಕ್ಕಿ ಎರಡನ್ನೂ ಉತ್ಪಾದಿಸಿ, ಇತರ ಒಕ್ಕಲಿಗರಿಂದ ಭಿನ್ನರಾಗಿ 'ಹಾಲಕ್ಕಿ' ಎಂದು ಹೆಸರಾದರು. ಹಾಲಕ್ಕಿಯೆಂದು ಹೆಸರಾದರೂ ಹಾಲನ್ನವುಂಡು ಅರಿಯರಿವರು. ಕೊಚ್ಚಗಿ ಅಕ್ಕಿ ಗಂಜಿ, ರಾಗಿ ಅಂಬ್ಲಿ ಮಾತ್ರ ಇವರಿಗೆ ಗೊತ್ತು. ಇಂದು ಇವರು ಬಹು ಸಂಖ್ಯೆಯಲ್ಲಿ ಕೂಲಿಕಾರರಾಗಿ, ಕೃಷಿಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಸಾಕಷ್ಟು ಭೂಮಿಯಿಲ್ಲದ ಸಾದು ಸ್ವಭಾವದ ಇವರು ಬೇರೆಯವರಲ್ಲಿ ಕೂಲಿಗೆ ಹೋದಾಗ, ಹಾಳಕ್ಕಿ (ಕೆಟ್ಟ ಅಕ್ಕಿ) ಯನ್ನು ಕೊಡಲಾಗುತ್ತಿತ್ತು. ಹಾಳಕ್ಕಿಯನ್ನು ಕೊಂಡು ಕೆಲಸ ಮಾಡುವವರು ಇವರಾದ್ದರಿಂದ ಇವರಿಗೆ ಹಾಳಕ್ಕಿ > ಹಾಲಕ್ಕಿ ಎಂಬ ಹೆಸರು ಬಂದಿರಬೇಕೆಂದು ವಿಷ್ಣು ನಾಯಕರ ಊಹೆ.[೧] ಆದರೆ ಹಾಲಕ್ಕಿ ಒಕ್ಕಲಿಗರಂತೆ ಕೂಲಿಯ ಕೆಲಸಕ್ಕೆ ಹೋಗುವ, ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಅವರಕ್ಕಿಂತ ಕೆಳದರ್ಜೆಯವರಾದ, ಇನ್ನೂ ಅನೇಕ ಜಾತಿಗಳಿವೆ. ಅವರೂ ಹಾಲಕ್ಕಿ ಒಕ್ಕಲಿಗರಂತೆ ಹಾಳಕ್ಕಿಯನ್ನೇ ಪಡೆದು ತೃಪ್ತಿಪಡಬೇಕು. ಅವರಿಗೇಕೆ ಈ ಹೆಸರು ಬರಲಿಲ್ಲ? ಮೇಲಾಗಿ ಬೇರೆಯವರು ಕುಚೇಷ್ಟೆಗಾಗಿ ಕರೆದ, ಕೀಳರಿಮೆಯನ್ನು ಹುಟ್ಟಿಸುವ ಹೆಸರನ್ನು ಹಾಲಕ್ಕಿಗಳು ಅಭಿಮಾನದಿಂದ ಸ್ವೀಕರಿಸಲು ಸಾಧ್ಯವಿಲ್ಲ. ಅದೇ ರೀತಿ ಹಿಂದಿಯ ಹಲಾಕ್‌ದಿಂದ ಹಾಲಕ್ಕಿ ಬಂದಿರಬಹುದೆಂಬ ಗೌರೀಶ ಕಾಯ್ಕಿಣಿಯವರ ಹೇಳಿಕೆಯನ್ನೂ ಒಪ್ಪಲಾಗದು.[೨] ಅಚ್ಚ

---

೧ ವಿಷ್ಣುನಾಯಕ: ಮುಂಗಾರು ಪುರವಣಿ ೯–೯–೧೯೮೬ ಪು. ೯ ಓದಿ.

೨ ನೋಡಿ ಡಾ॥ ಎನ್, ಆರ್. ನಾಯಕ: ಹಾಲಕ್ಕಿ ಒಕ್ಕಲಿಗರ ಜನಪದ ಗೀತೆಗಳು (೧೯೭೨) ಅಡಿಟಿಪ್ಪಣಿ ಪು. ೫.

ಗನ್ನಡ 'ಹಾಲಕ್ಕಿ' ಶಬ್ದಕ್ಕೆ ಹಿಂದಿ ಮೂಲದಿಂದ ನಿಷ್ಪತ್ತಿ ಹೇಳು ವುದು ಸೂಕ್ತವಲ್ಲ. ಹಾಲಕ್ಕಿ ಒಕ್ಕಲಿಗರು, ತಮ್ಮ ಹಾಲಕ್ಕಿ ಎಂಬ ಹೆಸರಿನ ಬಗ್ಗೆ ಅಭಿಮಾನವುಳ್ಳವರಾಗಿದ್ದಾರೆ. ಅವರು ತಮ್ಮ ಹುಟ್ಟಿನ ಮೂಲವನ್ನು ಕುರಿತ ಐತಿಹ್ಯಗಳನ್ನು ಹಾಲಕ್ಕಿಗೆ ಸಂಬಂಧಿಸಿಯೇ ಹೆಣೆದಿದ್ದಾರೆ. ಇಂಥ ಮೂರು ಐತಿಹ್ಯಗಳಿವೆ. ಒಂದನ್ನು ಅವಲೋಕಿಸಬಹುದು :

ನಾಗದುರ್ಗ ಹಾಳು ಬಿದ್ದು ಹನ್ನೆರಡು ವರ್ಷಗಳಾಗಿವೆ. ನಾಗಪುತ್ರ ಅದನ್ನು ಸಾಗುಮಾಡಲು ಹೋಗುತ್ತಾನೆ. ತಾಯಿ ನಾಗದೇವಿ ಹಸಿದ ಮಗನಿಗೆ ಹಾಲು ತೆಗೆದುಕೊಂಡು ಹೋಗು ವಾಗ ಕಾಲು ಜಾರುತ್ತದೆ, ಹಾಲು ಮಣ್ಣು ಪಾಲಾಗುತ್ತದೆ. ಆಗ ನಾಗದೇವಿಯು ಹಾಲಲ್ಲಿ ಬೆರೆತ ಮಣ್ಣಿನ ಮುದ್ದೆಯನ್ನು ಕಟ್ಟಿ, ಹಿಂತಿರುಗಿ ಮನೆಗೆ ಹೋಗಿ, ಮತ್ತೆ ಹಾಲು ತೆಗೆದು ಕೊಂಡು ಬರುತ್ತಾಳೆ. ಹಿಂತಿರುಗಿ ಬಂದಾಗ, ಆ ಮಣ್ಣಿನ ಮುದ್ದೆ ಹಾಲಕ್ಕಿ ಗೌಡನಾಗಿ ರೂಪಾಂತರಗೊಂಡಿತ್ತು. ಆಗ ನಾಗದೇವಿ ನಾಗದುರ್ಗವನ್ನು ಹಾಲಕ್ಕಿಗೌಡನಿಗೆ ಕೊಡಬೇಕೆಂದು ಮಗನಿಗೆ ಹೇಳುತ್ತಾಳೆ.೮ ಈ ಐತಿಹ್ಯದ ರಹಸ್ಯಾರ್ಥವನ್ನು ಹೀಗೆ ವಿವರಿಸಬಹುದು: ಹಾಲು ಉತ್ಪಾದಕರ ಗುಂಪಿಗೆ ಸೇರಿದ ಹೆಣ್ಣೊಬ್ಬಳು, ವ್ಯವಸಾಯಗಾರನೊಬ್ಬನನ್ನು ಕೂಡಿ, (ಕಾಲು ಜಾರುವುದನ್ನು ಹಾಲು ಚೆಲ್ಲುವುದನ್ನು ಗಮನಿಸಬೇಕು) ತನ್ನ ಸಂಸ್ಕೃತಿಯ ಎಲ್ಲೆಯನ್ನು ಮೀರಿ ಮಗನನ್ನು ಪಡೆಯು

೮ ಡಾ॥ ಎನ್. ಆರ್. ನಾಯಕ: ಹೇಳುತೇವೊ ಗುಮ್ಮ ಪದನಾವಾ (೧೯೮೩) ಪುಟ ೭೩ ನೋಡಿ.

ತ್ತಾಳೆ. ಆ ಮಗು ಹಾಲು ಮತ್ತು ಅಕ್ಕಿ ಸಂಸ್ಕೃತಿಯುವರ ನಡುವಣ ಕೊಂಡಿಯಾಗಿ, ಹೊಸ ಜನಾಂಗವೊಂದರ ಹುಟ್ಟಿಗೆ ಕಾರಣವಾಯಿತು, ಈ ಜನಾಂಗದವರು ಹಾಲು ಮತ್ತು ಅಕ್ಕಿ ಬೇಸಾಯ ವೃತ್ತಿಯನ್ನು ಪಾಲಿಸಿದ್ದರಿಂದ ಹಾಲಕ್ಕಿಗಳಾದರು.

ಹಾಲಕ್ಕಿ ಒಕ್ಕಲಿಗರು ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ ಮುಂತಾದ ಕರಾವಳಿಯ ನಾಲ್ಕು ತಾಲೂಕುಗಳಲ್ಲಿ ನೆಲೆಸಿದ್ದಾರೆ.

## ಆ. ಗೊಂಡರು:

ಗೊಂಡರು ಭಟಕಳ ತಾಲೂಕಿನ ಕೆಲವು ಗುಡ್ಡಗಾಡು ಹಳ್ಳಿಗಳಲ್ಲಿ ಹಾಗು ಹೊನ್ನಾವರದ ಒಂದೆರಡು ಹಳ್ಳಿಗಳಲ್ಲಿ ಮಾತ್ರ ವಾಸವಾಗಿದ್ದಾರೆ. ಗೊಂಡರ ವಿಷಯದಲ್ಲಿ ಯಾವ ಐತಿಹ್ಯವೂ ಲಭ್ಯವಿಲ್ಲ. ಅವರು ಬಲೀಂದ್ರನಂತೆ ತಾವೂ ಭೂಮಿ ಪುತ್ರರೆಂದು ಹೇಳಿಕೊಳ್ಳುತ್ತಾರೆ. ಹಾಲಕ್ಕಿ ಗೌಡರು ಬಲೀಂದ್ರನನ್ನು ಹಾಲಕ್ಕಿಗೌಡನೆಂದೇ ಭಾವಿಸುತ್ತಾರೆ. ಈ ನಂಬಿಕೆ, ಹಾಲಕ್ಕಿ ಒಕ್ಕಲು ಮತ್ತು ಗೊಂಡರು ಮೂಲತಃ ಒಂದೇ ಇರಬೇಕೆನ್ನುವ ಊಹೆಯನ್ನು ಪುಷ್ಟೀಕರಿಸುತ್ತದೆ. ಕೃಷಿ ಸ್ವಾಮಿಯೆಂದು ಪರಿಗಣಿತನಾದ ಬಲೀಂದ್ರನ ಆರಾಧನೆ, ಎಲ್ಲ ಒಕ್ಕಲಿಗರಿಗೂ ಸಾಮಾನ್ಯವಾಗಿದೆ. ಅಷ್ಟೇ ಅಲ್ಲ ಬಲೀಂದ್ರನ ಹಬ್ಬ ಅವರಿಗೆ ಮುಖ್ಯವೂ ಆಗಿದೆ.

ಗೊಂಡರು ವಿಂಧ್ಯ ಪ್ರದೇಶದಲ್ಲಿ ವಾಸಿಸುತ್ತಾರೆಂದು ತಿಳಿದು ಬಂದಿದೆ. 'ಕೊಂಡ' ಶಬ್ದದಿಂದ ಗೊಂಡ ಬಂದಿದೆ.

ಕೊಂಡ>ಗೊಂಡ ಪದಕ್ಕೆ ಗುಡ್ಡ, ದಿನ್ನೆ, ಭೂತ ಬೇತಾಳಗಳಲ್ಲಿ ಒಂದು ಹೆಸರು ಇತ್ಯಾದಿ ಅರ್ಥಗಳಿವೆ. ವಿಂಧ್ಯದ ಕಾಡಿನಲ್ಲಿ ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿ ಅಲೆಯುವ ಇವರನ್ನು ಇತರೆ ಸಂಸ್ಕೃತಿಯವರು ಪಿಶಾಚಿಗಳು, ಇವರ ಭಾಷೆಯನ್ನು ಪೈಶಾಚಿಗಳ ಭಾಷೆ ಎಂದರು. ಕಾಡಿನಲ್ಲಿ ಗುಡ್ಡ ಬೆಟ್ಟಗಳಲ್ಲಿ ಅಲೆಯುವ ಇವರನ್ನು ಕೊಂಡರು, ಗೊಂಡರು ಎಂದೂ ಕರೆವರು. ಈ ಜನ ಮಧ್ಯ ಭಾರತದಲ್ಲಿ ಇಂದೂ ಗಿರಿಜನರಾಗಿ ಬಾಳುತ್ತಿದ್ದಾರೆ. ಗೊಂಡರ ಹೆಸರಾಂತ ಮಂತ್ರಗಾರ ಪಂಡ ಬಾಬಾ ಹೇಳುವಂತೆ, ಅವರು ದಕ್ಷಿಣದಿಂದ ಬಹುಶಃ ಗೋದಾವರಿಯ ನದಿಯ ಮೂಲಕ, ಒಂದು ಮಧ್ಯ ಪ್ರಾಂತದಲ್ಲೆಲ್ಲ ಹಬ್ಬಿದರು. ಅವರು ತಮಿಳು ಮತ್ತು ಕನ್ನಡ ಎರಡಕ್ಕೂ ಹತ್ತಿರದ ಒಂದು ಬಗೆಯ ಭಾಷೆಯನ್ನಾಡುತ್ತಾರೆ.[೯] ಎಂದು ವೇರಿಯರ್ ಎಲ್ವಿನ್ ಹೇಳುತ್ತಾರೆ. ಮಧ್ಯ ಭಾರತದ ರಾಜ ಗೊಂಡ ಎಂಬ ಗಿರಿಜನರು ಒಂದು ಕಾಲದಲ್ಲಿ ದಕ್ಷಿಣ ಭಾರತದ ಮಧ್ಯ ಭಾಗದಲ್ಲಿ ಕನ್ನಡ ಮತ್ತು ತಮಿಳರ ಸಮೀಪದಲ್ಲಿ ವಾಸವಾಗಿರಬೇಕು. ಇವರ ಗೊಂಡೀ ಭಾಷೆಯೂ ಕನ್ನಡ ಮತ್ತು ತಮಿಳು ಭಾಷೆಗೆ ಹೆಚ್ಚು ಸಮೀಪವಾಗಿದೆ. ಕನ್ನಡಿಗರು ಹಲವಾರು ಜನಪದ ಅಂಶಗಳಲ್ಲಿ ಇವರೊಡನೆ ಹೋಲಿಕೆ ಹೊಂದಿದ್ದಾರೆ ಎಂದು ಸ್ಟೀಫನ್ ಫಸ್ಟ್ ಅವರ ಅಭಿಪ್ರಾಯ.

---

೯ ಎಚ್. ಎಲ್. ನಾಗೇಗೌಡ: ಗಿರಿಜನ ಪ್ರಪಂಚ (ದ್ವಿತೀಯ ಆವೃತ್ತಿ ೧೯೭೯) ಪುಟ ೯೮

ಮಧ್ಯ ಭಾರತ ಮತ್ತು ಆಂಧ್ರ ಪ್ರದೇಶದಲ್ಲಿರುವ ಗೊಂಡರು, ಉತ್ತರ ಕನ್ನಡ ಜಿಲ್ಲೆಗೆ ವಲಸೆ ಬಂದರೆಂದು ಹೇಳಲಾಗುತ್ತದೆ. ಆಂಧ್ರ ಪ್ರದೇಶದಿಂದ ಈ ಕಡೆಗೆ ವಲಸೆ ಬಂದವರಲ್ಲಿ ಹಾಲಕ್ಕಿ ಒಕ್ಕಲಿಗರೂ ಇದ್ದರೆಂದು ಊಹಿಸುವಂತಿದೆ. ಆ ಜನರು 'ಳ' ಶಬ್ದಕ್ಕೆ 'ಲ' ಕಾರ ಉಪಯೋಗಿಸುವ ಭಾಷಾ ಪ್ರಯೋಗದ ವೈಶಿಷ್ಟ್ಯವೂ, ನಮ್ಮ ಜನಪದ ಗೀತಗಳಲ್ಲಿ ಬರುವ ಮೂಡಿನ ಸಮುದ್ರದ ಉಲ್ಲೇಖವೂ ಹಾಲಕ್ಕಿಗಳೂ ಇತರ ಕೆಲವು ಒಕ್ಕಲಿಗರೂ ಆಂಧ್ರ ಪ ದೇಶದಿಂದ ಈ ಕಡೆಗೆ ವಲಸೆ ಬಂದಿರಬೇಕೆಂಬುದನ್ನು ಸಮರ್ಥಿಸುತ್ತವೆ.[೧೦] ಗೊಂಡರ ಹಿರಿಯರು ತಾವು ತಿರುಪತಿಯ ಗುಡ್ಡದ ಕಡೆಯಿಂದ ಬಂದವರೆಂದು ಹೇಳುತ್ತಾರೆ. ಗೊಂಡರು, ಹಾಲಕ್ಕಿ ಒಕ್ಕಲು ಗಾಮೊಕ್ಕಲು, ಕರೆ ಒಕ್ಕಲು, ಕೊಟ್ಟೆ ಒಕ್ಕಲು ಇವರೆಲ್ಲರೂ ತಿರುಪತಿಯ ತಿಮ್ಮಪ್ಪನ ಭಕ್ತರು ಎನ್ನುವುದನ್ನು ಗಮನಿಸಬೇಕು.

## ೩. ವಿಭಿನ್ನ ಪಂಗಡಗಳಾದ ಬಗೆ :

ಮೂಲತಃ ಕಾಡುವಾಸಿಗಳಾದ ಗೊಂಡರು, ಹಾಲಕ್ಕಿ ಒಕ್ಕಲು, ಕರೆ ಒಕ್ಕಲು ಮುಂತಾದವರ ಮೂಲ ವೃತ್ತಿ ಬೇಟೆ ಮತ್ತು ಬೇಸಾಯ. ಬೇಸಾಯದಲ್ಲಿಯೂ ಇವರು ಮೊದಲು ಮಾಡಿದ್ದು ಕುಂಬ್ರಿ ಬೇಸಾಯ. ಕುಂಬ್ರಿ ಬೇಸಾಯವನ್ನು ಎತ್ತಂಗಡಿ ಬೇಸಾಯವೆಂದೂ ಕರೆಯಲಾಗಿದೆ. ಕಾಡಿನ ಒಂದು ಪ್ರದೇಶವನ್ನು ಕಡಿದು ಸುಟ್ಟು ಊಳುವುದು. ಎರಡು ಮೂರು

೧೦ ಡಾ॥ ಎಲ್. ಆರ್. ಹೆಗಡೆ: ಗೊಂಡರ ಪದಗಳು (೧೯೭೭) ಪುಟ ೧

ವರ್ಷದ ನಂತರ ಇದನ್ನು ಬಿಟ್ಟು, ಬೇರೆ ಕಡೆ ಹೋಗಿ ಹೀಗೇ
ಮಾಡುವುದು, ಇದರಿಂದ ಕಾಡು ನಾಶವಾಗುತ್ತಿತ್ತು. ಆದ್ದರಿಂದ
ಆಂಗ್ಲ ಸರಕಾರ ಈ ರೀತಿಯ ಬೇಸಾಯವನ್ನು ನಿರ್ಬಂಧಿಸಿತು.
ಕ್ರಮೇಣ ಒಂದು ಪಂಗಡದವರು ಕಾಡು, ನಾಡು ಎರಡೂ ಕಡೆ
ನೆಲೆಸಿ ಅಕ್ಕಿ ಬೇಸಾಯ ಅದಕ್ಕೆ ಪೂರಕವಾದ ಹಾಲು ಹೈನದ
ವೃತ್ತಿಗೆ ಅಂಟಿಕೊಂಡು ಹಾಲಕ್ಕಿ ಒಕ್ಕಲಾದರು. ಇನ್ನೊಂದು
ಪಂಗಡ ಕಾಡನ್ನು ತ್ಯಜಿಸಿ ಗ್ರಾಮದಲ್ಲಿ ನೆಲೆಸಿ, ಒಕ್ಕಲುತನ
ವನ್ನಾರಂಬಿಸಿ (ಗ್ರಾಮ + ಒಕ್ಕಲು > ಗ್ರಾಮೊಕ್ಕಲು > )
ಗಾಮೊಕ್ಕಲಾದರು. ಗಾಮೊಕ್ಕಲು ಕುಮಟಾ ಮತ್ತು ಹೊನ್ನಾ
ವರ ತಾಲೂಕುಗಳಲ್ಲಿದ್ದಾರೆ. ಗಾಮೊಕ್ಕಲಲ್ಲಿ ತೀರ ಬಡವರಾದ
ಕೆಲವರು ತೋಟಗಾರ ಶ್ರೀಮಂತ ಒಡೆಯರನ್ನು ಆಶ್ರಯಿಸಿ
ಅವರ ಅಡಿಕೆಯ ಕೊನೆಗಳಿಗೆ ಕೊಟ್ಟೆಯನ್ನು ಕಟ್ಟುವ ವೃತ್ತಿ
ಯನ್ನು ಕೈಕೊಂಡು ಕೊಟ್ಟೆ ಒಕ್ಕಲೆನಿಸಿಕೊಂಡರು. ಇವರು
ತಾವು ಮೂಲತಃ ಗಾಮೊಕ್ಕಲೆಂದೇ ಹೇಳುತ್ತಾರೆ. ಇವರು
ಶಿರ್ಶಿ ಸಿದ್ದಾಪುರಗಳಲ್ಲಿದ್ದಾರೆ. ಇನ್ನೂ ಕೆಲವರು ದಟ್ಟವಾದ
ಕಾಡಿನ ಕತ್ತಲೆಯಲ್ಲಿಯೇ ಹೋರಾಟದ ಬದುಕನ್ನು ಬಾಳುತ್ತ
ತಮ್ಮ ಮೂಲ ವೃತ್ತಿಯನ್ನು ಹೆಚ್ಚಾಗಿ ಅವಲಂಬಿಸಿ, ಬೇರೆ
ಯವರಲ್ಲಿ ಕೂಲಿಗೆ ಸೇರದೆ, ತಮ್ಮತನವನ್ನುಳಿಸಿಕೊಂಡು ಕರೆ
(ನಿಜವಾದ) ಒಕ್ಕಲಿಗರೆಂದು ತಮ್ಮನ್ನು ಕರೆದುಕೊಂಡರು.
ಇವರನ್ನು "ಕರಿ" ಒಕ್ಕಲೆಂದು ತಪ್ಪಾಗಿ ಕೆಲವರು ಕರೆಯುತ್ತಾರೆ.
ಕಾರವಾರ, ಅಂಕೋಲಾ, ಕುಮಟಾ, ಶಿರ್ಸಿ, ಸಿದ್ದಾಪುರಗಳಲ್ಲಿ
ಈ ಗುಂಪು ನೆಲೆಸಿದೆ.

ಇಂದು ಬೇರೆ ಬೇರೆಯಾಗಿ ಕಾಣುವ ಈ ಒಕ್ಕಲಿಗ ಜನಾಂಗವೆಲ್ಲಾ ಮೂಲತಃ ಒಂದೇ ಬುಡಕಟ್ಟಿನವರು. ಇವರೆಲ್ಲರೂ ತಮ್ಮ ಹೆಸರಿನ ಮುಂದೆ ಗೊಂಡ ಇಲ್ಲವೆ ಗೌಡ ಎಂಬ ಅಡ್ಡ ಹೆಸರನ್ನಿಟ್ಟುಕೊಳ್ಳುತ್ತಾರೆ. 'ಗೊಂಡ' ಮತ್ತು "ಗೌಡ" ಎರಡೂ ಪದಗಳು ಒಂದೇ ಮೂಲದಿಂದ ಬಂದವು. ಬಯಲು ಸೀಮೆಯ ಕಡೆ 'ಗೌಡ' ಪದಕ್ಕೆ ಬದಲಾಗಿ 'ಗೊಂಡ' ಎಂದು ಬಳಸುವುದಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿಯೂ ಗೊಂಡರನ್ನು ಗೌಡರೆಂದೇ ಕರೆಯುತ್ತಾರೆ.

**೩. ಆಹಾರ ತಿಂಡಿ ತಿನಿಸು :**

ರಾಗಿ, ಅಕ್ಕಿ, ಮೀನ, ಮಾಂಸಗಳು ಸಾಮಾನ್ಯವಾಗಿ ಇವರ ಆಹಾರ. ಕೆಲವೆಡೆ ತೀರ ಬಡವರು ಬಿದಿರಿನ ಅಕ್ಕಿ, ತಾಳೆಯ ಮರದ ಹಿಟ್ಟನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಇವರ ತಿಂಡಿ ತಿನಿಸುಗಳೆಲ್ಲ ಹೆಚ್ಚಾಗಿ ಅಕ್ಕಿ ರಾಗಿಯಿಂದಲೇ ತಯಾರಾಗುತ್ತವೆ. ರಾಗಿಯ ಅಂಬ್ಲಿ, ಅಕ್ಕಿಯ ಗಂಜಿ, ಅನ್ನ, ಸೆಂಜಲು ಒಣಮೀನು ಇಲ್ಲವೆ ಮೆಣಸು ಇವು ನಿತ್ಯದ ಆಹಾರ. ಹಬ್ಬ ಹರಿದಿನಗಳಲ್ಲಿ ಪಾಯಸ, ವಡೆ, ದೋಸೆ, ಮೊಗೆಕಾಯಿಯ ರೊಟ್ಟಿ, ಸೀರುಬ್ಬಿ, ಗಾರಿಗೆ, ಕೊಟ್ಟೆ ಕಡುಬುಗಳು ಇವರ ವಿಶೇಷ ತಿಂಡಿ ತಿನಿಸುಗಳು.

೨

# ಸಮಾಜ ವ್ಯವಸ್ಥೆ, ಸಂಪ್ರದಾಯ, ನಂಬಿಕೆ ಮತ್ತು ವೈದ್ಯ

## ೧. ಸಮಾಜ ಸಂಘಟನೆ :

ಬುಡಕಟ್ಟು ಒಕ್ಕಲಿಗರು ತಾವು ನೆಲೆಸಿರುವ ಪ್ರದೇಶಗಳನ್ನು ಊರು ಹಾಗು ಸೀಮೆಗಳನ್ನಾಗಿ ವಿಂಗಡಿಸಿಕೊಳ್ಳುತ್ತಾರೆ. ಹಲವು ಊರುಗಳು ಸೇರಿದರೆ ಸೀಮೆಯಾಗುತ್ತದೆ. ಊರು ಹಾಗು ಸೀಮೆಗಳ ಮುಖ್ಯಸ್ಥರ ಸ್ಥಾನ ವಂಶ ಪರಂಪರೆಯಿಂದ ಬರುತದೆ. ಊರ ಮುಖ್ಯಸ್ಥನಿಗೆ ಊರ ಗೌಡನೆನ್ನುತ್ತಾರೆ. ಗೌಡನಿಗೆ ಸಹಾಯಕರಾಗಿ 'ಬುದ್ಧಿವಂತ' ಮತ್ತು 'ಕೋಲ್ಕಾರ'ರಿರುತ್ತಾರೆ. ಸೀಮೆಯ ಮಟ್ಟದಲ್ಲಿ ಅರಸುಗೌಡನು ಮುಖ್ಯಸ್ಥನು. ಅವನಿಗೆ ಸಹಾಯಕರಾಗಿ, ಮಾರ್ಗದರ್ಶಕರಾಗಿ ಪ್ರಧಾನಿಗೌಡ ಮತ್ತು ಗುರುಗೌಡರಿರುತ್ತಾರೆ. ಗೊಂಡರಲ್ಲಿ ಗೌಡನನ್ನು 'ಗೊಂಡ'ನೆಂದು ಕರೆಯುವ ವಾಡಿಕೆ. ಗ್ರಾಮ ಮಟ್ಟದ ತಂಟೆ ತಕರಾರುಗಳಿದ್ದಲ್ಲಿ ಊರ ಗೌಡನು ತೀರ್ಪು ನೀಡುತ್ತಾನೆ; ತಪ್ಪಿತಸ್ಥರಿಗೆ ದಂಡ ಹಾಕುವ, ಘೋರ ಅಪರಾಧವನ್ನು ಮಾಡಿದರೆ ಜಾತಿಯಿಂದ ಹೊರಗೆ ಹಾಕುವ ಅಧಿಕಾರ ಊರ ಗೌಡನಿಗೆ ಇಲ್ಲವೆ ಗೊಂಡನಿಗಿರುತ್ತದೆ. ಊರ ಮುಖಂಡರು ಕೊಟ್ಟ ತೀರ್ಮಾನವು ಅಪರಾಧಿಗೆ ಸೇರಿಕೆಯಾಗದಿದ್ದಲ್ಲಿ ವಾರ್ಷಿಕವಾಗಿ ನೆರೆಯುವ ಸೀಮಾಕೂಟದಲ್ಲಿ ಸೀಮೆಯ ಮುಖಂಡರ ಸಮ್ಮುಖದಲ್ಲಿ ಅಪರಾಧಿಯು ತನ್ನ ಅಹವಾಲು ಮಂಡಿಸಬಹುದು.

ಆದರೆ ಸೀಮೆಯ ಮುಖಂಡನು ಕೊಟ್ಟ ಕೊನೆಯ ತೀರ್ಪಾನ ವನ್ನು ಉಲ್ಲಂಘಿಸುವ ಅಧಿಕಾರ ಅಪರಾಧಿಗಿಲ್ಲ. ಸೀಮೆಯ ಮುಖಂಡರು ನೀಡಿದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳದೆ, ಅಪರಾಧಿಯು ಕೋರ್ಟಿಗೆ ಹೋದರೆ, ಅಂಥ ವ್ಯಕ್ತಿಯನ್ನು ದಂಡಿಸಿ, ಸಾಮಾಜಿಕ ಬಹಿಷ್ಕಾರ ಹಾಕಲೂ ಸಮಾಜ ಹಿಂದೆ ಮುಂದೆ ನೋಡುವುದಿಲ್ಲ. ಈ ಬಗೆಯ ಸಾಮಾಜಿಕ ವ್ಯವಸ್ಥೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬಹುಮಟ್ಟಿಗೆ ಕುಸಿದಿದೆ. ಗಾಮೊಕ್ಕಲಲ್ಲಿ ಈ ವ್ಯವಸ್ಥೆ ತೀರ ಶಿಥಿಲವಾಗಿದೆ. ಉಳಿದ ಒಕ್ಕಲಿಗರಲ್ಲಿ ಈ ವ್ಯವಸ್ಥೆ ಅಲ್ಲಲ್ಲಿ ಜೀವಂತವಾಗಿದೆ. ಈ ವ್ಯವಸ್ಥೆಯಿಂದ ಅಪರಾಧಿ ಕೋರ್ಟು, ಕಚೇರಿ, ವಕೀಲರೆಡೆ ಸುತ್ತಾಡುವ ಸಮಯದ ಉಳಿತಾಯ ಹಾಗು ತೆರಬೇಕಾದ ಹಣದ ಉಳಿತಾಯವಾಗುತ್ತದೆ.

**೨. ಕುಲಚಿಹ್ನೆ :**

ಬುಡಕಟ್ಟು ಜನಾಂಗದವರು ಕುಲಚಿಹ್ನೆ (ಟೋಟೆಮ್) ಉಪಾಸಕ ಸಂಸ್ಕೃತಿಗೆ ಸೇರುತ್ತಾರೆ. ಇವರು ತಮ್ಮ ಕುಲ ಗಳನ್ನು ಪ್ರಾಣಿ ಹಾಗು ವನಸ್ಪತಿ ಮೂಲಗಳಿಂದ ಗುರುತಿಸಿ ಕೊಳ್ಳುತ್ತಾರೆ. ಈ ಕುಲಗಳನ್ನು 'ಬಳಿ' (clan) ಇಲ್ಲವೆ ಬಳ್ಳಿ ಗಳೆಂದು ಕರೆದುಕೊಳ್ಳುತ್ತಾರೆ.[೧] ಬಳಿಯವರಿಗೆ ಅವರ ಬಳಿಯ ಪ್ರಾಣಿ ಇಲ್ಲವೆ ವನಸ್ಪತಿಗಳು ಪೂಜ್ಯ. ತಮ್ಮ ಬಳಿಯ ಪ್ರಾಣಿ,

೧ ಅರ್ಜುನನ ಕಪಿ ಧ್ವಜ, ದುರ್ಯೋಧನನ ಸರ್ಪ ಧ್ವಜಗಳೂ ಸಹ ಟೋಟೆಮ್ ಸಂಕೇತಗಳಾಗಿರಬಹುದು. ಈ ಸಂದರ್ಭದಲ್ಲಿ ಹಾಲಕ್ಕಿ ಒಕ್ಕಲಿಗರು ತಮ್ಮನ್ನು ಪಾಂಡವರ ಕುಲದವರೆಂದು ಕರೆದುಕೊಳ್ಳುವು ದನ್ನು ನೆನೆಯಬೇಕು.

ವನಸ್ಪತಿಗಳನ್ನು ಆಯಾ ಬಳಿಯವರು ನಾಶಪಡಿಸುವುದಿಲ್ಲ. ಇದರಿಂದ ಒಂದು ಹಂತದಲ್ಲಿ ಪ್ರಾಣಿ ಹಾಗು ವನಸ್ಪತಿಗಳ ಸಂರಕ್ಷಣೆಯೂ ಆಗುತ್ತಿತ್ತು. ಈ ಬಗೆಯ ಬಳಿಯ ವ್ಯವಸ್ಥೆಯು ನಾಡವರು, ನಾಮಧಾರಿ, ಮುಂತಾದ ಮಾತೃಪ್ರಧಾನ ಕುಟುಂಬದವರಲ್ಲಿಯೂ ಇದೆ; ಅಷ್ಟೇ ಅಲ್ಲ ಕೆಲವು ಬಳಿಗಳ ಹೆಸರುಗಳೂ ಒಂದೇ ಆಗಿವೆ. ಬಹುಶಃ ಇವೆರಡು ಸಂಸ್ಕೃತಿಗಳು ಒಂದೇ ಮೂಲದಿಂದ ಕವಲೊಡೆದಿರಬೇಕು. ಕುಲ ಚಿನ್ಹೆ ಸಂಸ್ಕೃತಿಯವರಲ್ಲಿಯೂ ಮೂಲತಃ ತಾಯಿಯಿಂದಲೇ ಬಳಿ ಮುಂದುವರಿಯುವ ಪದ್ಧತಿಯಿದ್ದಿರಬೇಕು. ಗೊಂಡರಲ್ಲಿ ತಾಯಿಯಿಂದಲೇ ಬಳಿ ಮುಂದುವರಿಯುತ್ತದೆ. ಆದರೆ ಹಾಲಕ್ಕಿ ಒಕ್ಕಲಿಗರು ಮತ್ತು ಕರೆ ಒಕ್ಕಲಲ್ಲಿ ಬಳಿ ತಂದೆಯಿಂದ ಮುಂದುವರಿಯುತ್ತದೆ. ಪಿತೃಪ್ರಧಾನ ಸಂಸ್ಕೃತಿಯವರ ಪ್ರಭಾವದಿಂದ ಈ ಪದ್ಧತಿ ಇವರಲ್ಲಿ ಬಳಕೆಯಲ್ಲಿ ಬಂದಂತಿದೆ. ಬಳಿಗಳು ಬ್ರಾಹ್ಮಣರಲ್ಲಿಯ ಗೋತ್ರಗಳಂತೆ ಗೊಂಡರಲ್ಲಿ ಹೊನ್ ಬಳಿ, ತೋಳಾರ ಬಳಿ, ದ್ಯಾವ್ಕರ್ ಬಳಿ, ಅನ್ಬಳಿ, ಅಜ್ರಬಳಿ, ಶಿತಿನ ಬಳಿ, ಕಾಯ್ ಬಳಿ, ಹಾಲ್ ಬಳಿ, ಮಲ್ಲಿಗೆ ಬಳಿ, ದೇವನ ಬಳಿ, ಹೊಲಿ ಬಳಿಗಳಿವೆ. ಕರೆ ಒಕ್ಕಲಲ್ಲಿ ಆನ್ ಬಳಿ, ಹೊಲಿ ಬಳಿ, ಕಾಯ್ ಬಳಿ, ಶೆಟ್ಟಿ ಬಳಿಗಳಿವೆ. ಹಾಲಕ್ಕಿ ಒಕ್ಕಲಿಗರಲ್ಲಿ, ದೇವನ ಬಳಿ, ಕೇದಗೆ ಬಳಿ, ಕುಂಟಿ ಬಳಿ, ಮಂಜಾಳ ಬಳಿ, ಶಿರ್ಕಾಳ ಬಳಿ, ಕಡವೆ ಬಳಿ, ಬರಕನ ಬಳಿ, ದ್ಯಾವಳ ಬಳಿ, ಮಂಗಳ ಬಳಿ, ಬೈರ ಬಳಿ, ಮುಸಗೆ ಬಳಿ ಮುಂತಾದ ಬಳಿಗಳಿವೆ.

**೩. ಮದುವೆ :**

ಮದುವೆ ಹಾಲಕ್ಕಿ ಒಕ್ಕಲಿಗರ ಪ್ರಮುಖ ಸಂಸ್ಕಾರಗಳಲ್ಲೊಂದು. ಕನ್ನೆಯು ಮೈನೆರೆಯುವ ಪೂರ್ವದಲ್ಲಿಯೇ ಮದುವೆಯನ್ನು ಮಾಡಬೇಕು. ಪ್ರಾಚೀನ ಕಾಲಕ್ಕೆ ಕನ್ನೆಯು ಮದುವೆಯ ಪೂರ್ವದಲ್ಲಿ ಮೈನೆರೆದರೆ ಅವಳ ಕಣ್ಣನ್ನು ಕಟ್ಟಿ ನಿರ್ಜನ ಕಾಡಿನಲ್ಲಿ ಬಿಡುವ ಕ್ರೂರ ಸಂಪ್ರದಾಯವು ಇವರಲ್ಲಿಯೂ ಇತ್ತಂತೆ. ಇದನ್ನು ಖಚಿತಪಡಿಸುವ ಜನಪದ ಕತೆಗಳು ದೊರೆಯುತ್ತವೆ. ಆದರೆ ಇಂದು ಈ ಪದ್ಧತಿಯಿಲ್ಲ. ಇಂದು ವರದಕ್ಷಿಣೆಯ ಪದ್ಧತಿಯು ಮೇಲ್ವರ್ಗದವರಲ್ಲಿ ಪ್ರಚಲಿತವಿರುವುದು ಎಲ್ಲರಿಗೂ ಗೊತ್ತಿದ್ದ ವಿಷಯ. ಆದರೆ ಬುಡಕಟ್ಟು ಜನಾಂಗದವರಲ್ಲಿ ಈ ಅನಿಷ್ಟ ಪದ್ಧತಿಯಿಲ್ಲ. ಇವರಲ್ಲಿ ಹೆಣ್ಣಿಗೇ ತೆರತೆತ್ತು ಮದುವೆ ಮಾಡಿಕೊಳ್ಳುವ ರೂಢಿ ಸಾಕಷ್ಟಿದೆ. ಹೆಣ್ಣಿಗೆ ತೆರಕೊಡುವ ಪದ್ಧತಿಯು ಹಿಂದಕ್ಕೆ ಬ್ರಾಹ್ಮಣರೇ ಮೊದಲಾದ ಉಚ್ಚವರ್ಗದವರಲ್ಲಿಯೂ ಪ್ರಚಲಿತವಿದ್ದುದಕ್ಕೆ ಮದುವೆಯ ಚಡಂಗಗಳಲ್ಲಿ ಸಾಕ್ಷಿ ದೊರೆಯುತ್ತದೆ.

ಮದುವೆ ನಿಶ್ಚಯದ ಮಾತುಕತೆಗಳು ಜಾತಿಯ ಮುಖಂಡರ ಹಿರಿತನದಲ್ಲಿ ನಡೆಯುತ್ತವೆ. ಮದುವೆಯ ನಿಶ್ಚಯದ ದ್ಯೋತಕವಾಗಿ, ಬೆಲ್ಲಕಾಯಿ ಇಲ್ಲವೆ ಸೀತಿಂಡಿ ತಿನ್ನುತ್ತಾರೆ. ಕೆಲವೆಡೆ ಹೆಣ್ಣಿಗೆ ಬಳೆತೊಡಿಸುವ ಪದ್ಧತಿಯೂ ಇದೆ. ಮದುವೆಯ ಕಾಲಕ್ಕೆ ಜಾತಕವನ್ನು ನೋಡಿಸುವುದಾಗಲಿ, ಮದುವೆಯ ಪೌರೋಹಿತ್ಯಕ್ಕೆ ಬ್ರಾಹ್ಮಣರನ್ನು ಕರೆಯುವುದಾಗಲಿ

ಇವರಲ್ಲಿ ಬಳಕೆಯಲ್ಲಿಲ್ಲ.[೨] ಮದುವೆ ನಡೆಯುವುದು ಜಾತಿಯ ಮುಖಂಡರ ನೇತೃತ್ವದಲ್ಲಿ. ಮದುವೆಯಲ್ಲಿ ಅವರಿಗೂ ಉಡುಗೊರೆ ಸಲ್ಲುತ್ತದೆ. ಹಾಲಕ್ಕಿ ಒಕ್ಕಲಿಗರ ಮದುವೆಯಾಗುವುದು ಸಾಮಾನ್ಯವಾಗಿ ಮಳೆಗಾಲದಲ್ಲಿ, ಇನ್ನುಳಿದವರ ಮದುವೆ ಸಾಮಾನ್ಯವಾಗಿ ಬೇಸಗೆಯಲ್ಲಾಗುತ್ತದೆ.

ಮದುವೆಗೆ ಮಂಗಲವಾದ್ಯಗಳು ಬೇಕು. ಮದುಮಗನ ಅಕ್ಕ,ಭಾವ. ಮದುವೆಯಲ್ಲಿ ಪ್ರಮುಖ ಪಾತ್ರವಾಡುತ್ತಾರೆ. ಮದುವೆಯಲ್ಲಿ ಕಳಸ ಹಿಡಿಯುವವಳು ಅಕ್ಕ; ಭಾವ, 'ಜಡತನ'ಕ್ಕೆ ಬೇಕು. ಇವನಿಗೆ ಸಂಚಿಭಾವ ಇಲ್ಲವೆ ಚತ್ತಗಾರ – ತೆತ್ತಗಾರ ಎಂದು ಮುಂತಾಗಿ ಕರೆಯುತ್ತಾರೆ.

> ಪೆಪೆಯುವರು ಮುಂದಾಗೇ ವಾದ್ಯದೋರು ಹಿಂದಾಗೇ
> ಊರ ಗೌಡರು ನಿಡಗಾಗೇ । ಹೋಗುವಾಗೇ
> ಜೋತರುಟ್ಟವನು ಮದ್ವರಾಯ । ಬೆನ್ನೀಗೇ
> ಜಡತನ ಮಾಡಿದೋನು ಹೆರೀಬಾವ । ಬೆನ್ನೀಗೇ
> ಕಳಶೇಲಿ ಮಾಡಿದೋಳು ಹೆರೀಯಕ್ಕ[೩]

ಈ ಹಾಡು ಬುಡಕಟ್ಟು ಜನಾಂಗಗಳ ಮದುವೆಯ ಸ್ಪಷ್ಟ ಚಿತ್ರವನ್ನು ಕೊಡುತ್ತದೆ.

---

೨ ಇತ್ತೀಚೆಗೆ ಕ್ವಚಿತ್ತಾಗಿ ಜಾತಕ ನೋಡಿಸುವುದು ಪುರೋಹಿತರನ್ನು ಕರೆಯುವುದು ಕೆಲವರಲ್ಲಿ ಪ್ರಚಲಿತವಿದೆ.

೩ ಡಾ॥ ಎಸ್. ಆರ್. ನಾಯಕ : ಕೂಸಾಯ್ತು ನಮ್ಮಾ ಕೂಮರಾಗೆ (೧೯೮೩) ಪುಟ. ೨೭೫.

ಪನ್ನೆ, ತೀಗರು ತಿಕ್ಕುವುದು, ಕುಂಭದ ನೀರು ಮೀಯುವುದು, ಮುಹೂರ್ತ ಭತ್ತ ಮೆರೆಯುವುದು, ಬಾಸಿಂಗ ಸೂಡುವುದು, ದಿಬ್ಬಣ ಹೊರಡುವುದು, ಎದುರುಗೊಳ್ಳುವುದು, ಹೆಣ್ಣಿಗೆ ಹೂಮುಡಿಸುವುದು, ತೆರಕೊಡುವುದು, ಧಾರೆಯೆರೆಯುವುದು, ಹೆಣ್ಣೊಪ್ಪಿಸುವುದು, ಉಡುಗೊರೆ, ಬಳುವಳಿ ಕೊಡುವುದು, ಮನೆ ತುಂಬಿಸುವುದು ಮುಂತಾದ ಹಲವಾರು ಮದುವೆಯ ಚಡಂಗಗಳು ಬುಡಕಟ್ಟಿನ ಎಲ್ಲ ಉಪಪಂಗಡಗಳಲ್ಲಿ ಸಾಮಾನ್ಯವಾಗಿವೆ. ಗೊಂಡರ ವರನ ಕೈಯಲ್ಲಿ ವರಗಾಯಿಗೆ ಬದಲಾಗಿ ಬಾಕು ಇರುತ್ತದೆ. ಇದಕ್ಕೆ ಸಂಬಂಧಿಸಿದ ಐತಿಹ್ಯವೂ ಇದೆ. ಬಾಕು ಹಿಡಿಯುವ ಪದ್ಧತಿ ಹಾಲಕ್ಕಿ ಒಕ್ಕಲಿಗರಲ್ಲಿಲ್ಲ. ಹಾಲಕ್ಕಿ ಒಕ್ಕಲಿಗರಲ್ಲಿ ಮದುವೆಯ ಹೆಣ್ಣನ್ನು ಕೆಲಸಮಯ ಅಡಗಿಸಿಟ್ಟು ವರನನ್ನು ಫಜೀತಿಗೀಡುಮಾಡುವ, ವಧೂವರರ ಅಕ್ಕಂದಿರು ಕೆಲಕಾಲ ವಧೂವರರ ಬಾಸಿಂಗ ಮತ್ತು ತೊಂಡಿಲುಗಳನ್ನು ಕಟ್ಟಿಕೊಂಡು 'ಮುಟ್ಟಾಗಿ' ತಕ್ಕೊಂಡು ಗೌಡನಿಗೆ ಕೈಮುಗಿದು ಬರುವ, ವಿಶೇಷ ಚಡಂಗಗಳು ಕೆಲವೆಡೆ ಪ್ರಚಲಿತವಿವೆ. ಉಳಿದ ಬುಡಕಟ್ಟು ವರ್ಗಗಳಲ್ಲಿ ಈ ಸಂಪ್ರದಾಯವಿಲ್ಲ. ಹೆಣ್ಣಿಗೆ ಕರಿಮಣಿ ಕಟ್ಟುವ ಸಂಪ್ರದಾಯ ಇವರಲ್ಲಿ ಇತ್ತೀಚಿಗೆ ರೂಢಿಯಲ್ಲಿ ಬಂದಿದೆ. ಹಿಂದೆ ಕರಿಮಣಿಗೆ ಬದಲಾಗಿ ನೂಲುಕಟ್ಟುವ ಪದ್ಧತಿ ಕೆಲವರಲ್ಲಿ ಇತ್ತಂತೆ.

ಹಾಲಕ್ಕಿ ಒಕ್ಕಲಿಗರ ಮದುವೆಯಲ್ಲಿ ಪುರೋಹಿತನ ಮಂತ್ರದ ಸ್ಥಾನವನ್ನು ಹೆಂಗಸರ ಹಾಡುಗಳು ಪಡೆಯುತ್ತವೆ. ಹಿಂದೆ ಐಯ್ದು ದಿನಗಳವರೆಗೆ ಮದುವೆ ನಡೆಯುತ್ತಿತ್ತು. ಈಗ

ಅರ್ಧದಿನದಲ್ಲಿ ಮದುವೆ ಮುಗಿದು ಹೋಗುವುದರಿಂದ ಮದುವೆಯ ಹಾಡುಗಳೂ ಕರಗಿ ಹೋಗಿವೆ. ಆದರೂ ಮದುವೆಯಲ್ಲಿ ಹಾಡುವ ಸಂಪ್ರದಾಯವನ್ನು ಇವರು ಇನ್ನೂ ಉಳಿಸಿಕೊಂಡು ಬಂದದ್ದು ಜಾನಪದದ ಪುಣ್ಯ. ಮದುವೆಯ ವಿವಿಧ ಚಡಂಗಗಳನ್ನು ವಿವರಿಸುವ ಹಾಡುಗಳು ರಾಗಬದ್ಧವಾಗಿದ್ದು ರಸವತ್ತಾಗಿವೆ :

ಬಾಶಿಂಗವ ಮ್ಯಾನೆ ಆರವತ್ತು ಗಿಳ ಕುಳತೊ
ಚಂದ್ರ ಮಾಣಿಕದ ರವೆ ಬಂದೊ । ಚೋss]
ಚಂದ್ರ ಮಾಣಿಕದ ರವೆ ಬಂದಾ ಬಾಸಿಂಗವ
ತಂದೆ ಬಣ್ಣಿಶರೊ ಮಗsನಿಗೆ । ಚೋss
* * * * *

ಹುಟ್ಟೀದ ಮಗಳೇ ಮೆಟ್ಟಂಗಳಿಳಿವಾಗೇ
ಹೊಟ್ಟೆಯೊಳಗೆಲ್ಲ ಕಳಮಳ । ಕಂಗಳಮಳೆ
ಹುಟ್ಟೀದ ಮಗಳೇ ನೆರ್s ಮನಿಯೇ । ಹೋಗುವಾಗೇ
ಮಗಳಂತ ರೂವಾ ಬರ್sಕೊಳ್ಳೆ । ಹೆಣ್ಣಿನ ತಾಯೆ
ರೂವಾ ನೋಡೇ ಜಾನಾ ಮರೀಕೊಳೇ ॥s

## ೪. ಶೋಭನ–(ದಿಂಡು) :

ಹೆಣ್ಣು ಮ್ಯೆನೆರೆಯುವ ಪೂರ್ವದಲ್ಲಿಯೇ ಮದುವೆಯಾಗುವುದರಿಂದ, ದಿಂಡಿನ ಕಾರ್ಯಕ್ರಮ ಹೆಣ್ಣು ಮ್ಯೆನೆರೆದ ಮೇಲೆ

---

೪ ಡಾ॥ ಎನ್. ಆರ್. ನಾಯಕ : ಕೂಸಾಯ್ತು ನಮ್ಮಾ ಕೊಮರಾಗೆ (೧೯೮೩) ಪು. ೨೬೭

೫ ಡಾ॥ ಎನ್. ಆರ್. ನಾಯಕ : ಕೂಸಾಯ್ತು ನಮ್ಮಾ ಕೊಮರಾಗೆ (೧೯೮೩) ಪು. ३೦೧

ಆಗುತ್ತದೆ. ಹಾಲಕ್ಕಿ ಒಕ್ಕಲಿಗರು ಹೆಣ್ಣು ಮೈನೆರೆವ ಒಂದು ವರ್ಷದ ಮೇಲೆ ದಿಂಡು ಮಾಡುತ್ತಾರೆ. ಇದೊಂದು ಆರೋಗ್ಯ ಕರ ಕ್ರಮ. ಕನ್ನೆ ಮೈನೆರೆದ ತತ್‌ಕ್ಷಣದಲ್ಲಿ ಹೆಣ್ಣಾಗುವುದಿಲ್ಲ. ಅವಳ ಸಂತಾನದೊಡಲು ಹದಗೊಳ್ಳಲು ಕಾಲಾವಕಾಶ ಬೇಕಾಗು ತ್ತದೆ. ಈ ಸೂಕ್ಷ್ಮವನ್ನರಿತ ಹಾಲಕ್ಕಿ ಒಕ್ಕಲಿಗರ ಬೌದ್ಧಿಕತೆ ಯನ್ನು ಮೆಚ್ಚಬೇಕು. ವಿವಾಹಿತ ಕನ್ನೆ ಋತುಮತಿಯಾದ ಐದು ಇಲ್ಲವೆ ಏಳನೆಯ ದಿನಕ್ಕೆ ದಂಪತಿಗಳು ಒಂದಾಗಲು ಅವ ಕಾಶಮಾಡಿಕೊಡುವ ಕಾರ್ಯಕ್ರಮವನ್ನು ದಿಂಡು ಇಲ್ಲವೆ ಶೋಭನವೆಂದು ಕರೆಯುತ್ತಾರೆ. ಇದನ್ನು ಗಂಡಿನ ಮನೆಯಲ್ಲಿ ಮದುವೆಯಷ್ಟೇ ವಿಜೃಂಭಣೆಯಿಂದ ಹಿಂದಕ್ಕೆ ಆಚರಿಸುತ್ತಿದ್ದರು. ಆದರೆ ಇಂದು ಆ ವೈಭವ ಸೊರಗಿ ಹೋಗಿದೆ.

## ೫. ಹುಟ್ಟು :

ಮದುವೆಯಾದ ಹೆಣ್ಣು ಬಸುರಿಯಾದ ಏಳನೆಯ ತಿಂಗ ಳಿಗೆ ಬಯಕೆಯನ್ನು ಬಡಿಸಿ, ತವರಿಗೆ ಕಳಿಸಿಕೊಡುತ್ತಾರೆ. ತವರಿ ನಲ್ಲಿಯೂ ಗರ್ಭವತಿಗೆ ಬಯಕೆಯನ್ನು ಬಡಿಸಿ, ಅವಳು ಮಗು ವಿನ ತಾಯಾಗುವ ವರೆಗೂ ಅವಳ ಪೋಷಣೆಯ ಹೊರೆ ಯನ್ನು ಹೊರುತ್ತಾರೆ. ಮಗು ಹುಟ್ಟಿದ ಐಯ್ದನೆಯ ದಿನಕ್ಕೆ ಮಗುವಿನ ಉದುರಿದ ಹೊಕ್ಕಳು ಬಳ್ಳಿಯನ್ನು ಹುಗಿದು ಅಲ್ಲೊಂದು ಕೋಲು ನೆಟ್ಟು, ಕೋಲಿನ ತುದಿಗೆ ರೊಟ್ಟಿಯನ್ನು ಕಟ್ಟಿ, 'ಅಮೆ'ಯೆಂದು ಕರೆಯಲಾಗುವ ಅದನ್ನು ಪೂಜಿಸುತ್ತಾರೆ. ಈ ಸಂಪ್ರದಾಯ ಬುಡಕಟ್ಟಿನ ಎಲ್ಲ ಉಪ ಪಂಗಡಗಳಲ್ಲಿಯೂ

ಇದೆ; ಆದರೆ ಆಚರಣೆಯ ವಿಧಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿವೆ. ಹನ್ನೊಂದನೆಯ ದಿನಕ್ಕೆ ನಾಮಕರಣವನ್ನು ಮಾಡಿ ಮಗುವನ್ನು ತೊಟ್ಟಿಲಿಗೆ ಹಾಕುತ್ತಾರೆ, ಆಗ ಜೋಗುಳ ಹಾಡುವುದು ಸಂಪ್ರದಾಯ.

ಹುಟ್ಟಿದ ಮಕ್ಕಳಿಗೆ ಹೆಸರಿಡಲು ಇವರು ವಿಶೇಷ ಯೋಚನೆ ಮಾಡುವುದಿಲ್ಲ. ಮಗು ಹುಟ್ಟಿದ ವಾರದ ಹೆಸರನ್ನು ಇಲ್ಲವೆ ಸತ್ತ ಹಿರಿಯರ ಹೆಸರನ್ನಿಡುವ ಪದ್ಧತಿಯಿದೆ. ಕೆಲವರು ಕುಲ ದೇವತೆಯ ಹೆಸರನ್ನಿಡುತ್ತಾರೆ. ಸೋಮು, ಸುಕ್ರು, ಬುದ್ದು, ಮಂಗ್ಳು, ಸಣ್ಣು, ಬೀರ, ಗೊಯ್ದು, ಹುಲಿಯಾ, ಗಿರಿಯಾ, ಕರಿಯಾ, ಮುಂತಾಗಿ ಗಂಡುಮಕ್ಕಳಿಗೆ, ಹೆಸರಿಡುವರು. ಸೋಮಿ, ಶುಕ್ರಿ ಮಾಸ್ತಿ, ಅಮ್ಮ, ಶಿವಿ, ತುಳಸಿ, ನಾಗಿ ಮುಂತಾಗಿ ಹೆಣ್ಣು ಮಕ್ಕಳಿಗೆ ಹೆಸರಿಡುವುದು ರೂಢಿ.

## ೬. ಲೈಂಗಿಕ ಹೊಂದಾಣಿಕೆ :

ಅ. ಕೆಲವು ಬುಡಕಟ್ಟು ಜನಾಂಗಗಳಲ್ಲಿ ವಿವಾಹ ಪೂರ್ವದಲ್ಲಿ ತರುಣರಿಗೆ ಮುಕ್ತ ಲೈಂಗಿಕತೆಗೆ ಅವಕಾಶವಿತ್ತಿವೆ. ವಿವಾಹ ನಂತರದ ಲೈಂಗಿಕ ಅಪರಾಧವನ್ನು ಅವರು ತೀರ ಗಂಭೀರವಾಗಿ ಪರಿಗಣಿಸುವುದಿಲ್ಲ, ಹೆಣ್ಣಿನ ಸಂಖ್ಯೆ ಕಡಿಮೆಯಿದ್ದ ಜನಾಂಗಗಳಲ್ಲಿ ಕೆಲವು ಗಂಡಸರು ಮದುವೆಯಿಲ್ಲದೇ ಸ್ತ್ರೀ ಸುಖದಿಂದ ವಂಚಿತರಾಗುವ ಪರಿಸ್ಥಿತಿಯೊದಗುತ್ತಿತ್ತು. ಆಗ ಪ್ರಕೃತಿ ಸಹಜವಾದ ಕಾಮ ವಾಂಛೆಯನ್ನ ತಣಿಸುವ ಅವಕಾಶವೊಂದನ್ನು ಅವರು ಕಲ್ಪಿಸಿಕೊಂಡರು. ಅಣ್ಣ ತಮ್ಮಂದಿರಲ್ಲಿ ಹಿರಿಯನೊಬ್ಬನು

ಮಾತ್ರ ಮದುವೆಯಾಗಿ, ಉಳಿದವರು ಆಕೆಯೊಡನೆ ಲೈಂಗಿಕ ಸಂಬಂಧವಿಟ್ಟುಕೊಳ್ಳುತ್ತಾರೆ. ಅಟ್ಟಿಗೆ>ಅತ್ತಿಗೆ, ಮೈಥನ> ಮೈದುನ, ಭಾವ, ಮೈದಿನಿ ಮುಂತಾದ ಪದಗಳೂ ಕೂಡ ಪರಸ್ಪರರಲ್ಲಿಯ ಪ್ರೀತಿ, ಮೈಥುನ ಸಂಬಂಧವನ್ನು ಭಾವೈಕ್ಯವನ್ನು ಸೂಚಿಸುತ್ತವೆ. ಮೂಲತಃ ಎಲ್ಲ ಜನಾಂಗಗಳಲ್ಲಿ ಪ್ರಾಚೀನ ಕಾಲಕ್ಕೆ ರೂಢಿಯಲ್ಲಿದ್ದಿರಬಹುದಾದ ಈ ಪದ್ಧತಿ ಹಾಲಕ್ಕಿ ಒಕ್ಕಲಿಗರಲ್ಲಿ ಸುಮಾರು ಅರ್ಧಶತಮಾನದ ಹಿಂದೆ ಪ್ರಚಲಿತವಿದ್ದುದನ್ನು ಹಿರಿಯರಿಂದ ಕೇಳಿದ್ದೇನೆ; ಕೆಲವು ವಿದ್ವಾಂಸರು ಇದನ್ನು ದಾಖಲಿಸಿದ್ದೂ ಉಂಟು. ಈ ಪದ್ಧತಿ ಒಕ್ಕಲಿಗ ಬುಡಕಟ್ಟಿನಲ್ಲಿ ಇದ್ದಿರಬಹುದಾದ ಸಾಧ್ಯತೆಗಳನ್ನು ಕೆಲವು ಜನಪದ ಗೀತಗಳು ಸಾಬೀತುಗೊಳಿಸುತ್ತವೆ. ಪುರಾಣ ಕತೆಯಲ್ಲಿ ತಮ್ಮ ಸಾಮಾಜಿಕ ಸಂಪ್ರದಾಯಗಳನ್ನು ಸೇರಿಸುವುದು ಜಾನಪದದ ಜಾಯಮಾನ. ಅದಕ್ಕಾಗಿ ಪುರಾಣ ಪ್ರಸಂಗಗಳಲ್ಲಿಲ್ಲದ ಅನೇಕ ಸಾಮಾಜಿಕ ಸಂಗತಿಗಳು ಪುರಾಣ ಕತೆಗಳಲ್ಲಿರುತ್ತವೆ. ಅದರ ಆಧಾರದಿಂದ ಒಂದು ಸಮಾಜದ ಸಾಮಾಜಿಕ ಸ್ವರೂಪವನ್ನು ನಿರ್ಧರಿಸಿದರೆ ತಪ್ಪಾಗಲಾರದಷ್ಟೆ?

ಗಾಮೊಕ್ಕಲ ಮಹಾಭಾರತದಲ್ಲಿಯ ದುಶ್ಯಾಸನ ಹೀಗೆನ್ನುತ್ತಾನೆ:

ಹಿತ್ತೀಲ ಕಣಕೇ ಚಂಪ್ತೀಯ ನೆಟ್ಟೀದೆ
ನೆಟ್ಟಪರಿಗರ್ದ ನೆರಿಗರ್ದ । ಅಣ್ಣನ ಮಡ್ದಿ
ಅಣ್ಣಗೆ ಅರ್ದ ತನಗರ್ದ ।

ಇಂತಹದೇ ಇನ್ನೊಂದು ಸಂದರ್ಭವನ್ನು ಅವಲೋಕಿಸಿರಿ :

ಗುಡ್ಡ ಗುಡ್ಡಿಯ ದಾಟಿ ಕಡಗಲ್ ಸಂಕವದಾಟಿ
ಕದ್ದಾಡಿ ಬಂದೆ ನಿನಗಾಗಿ । ಅತ್ತೀಗೆ
ಗಬ್ಬೀಣ ಕದವಾ ತಗಿ ಬಾರೆ । ಅತ್ತೀಗೆ
ಕಬ್ಬೀನಂತೋಳೆ ಮೊಕುತೋರೆ ।

ಕಥೆಯೊಂದರಲ್ಲಿ ರಥಕೃಷ್ಣನ ಆರು ಮಂದಿ ಅತ್ತಿಗೆಯರು ಅವನನ್ನು ಕುರಿತು, ತಮ್ಮನ್ನೇ ನಂಬಿಕೊಂಡಿರು, ದೇವಲೋಕಕ್ಕೆ ಹೋಗಬೇಡ ಎಂದು ಹೇಳಿದ್ದನ್ನು ಡಾ। ಎಲ್. ಆರ್ ಹೆಗಡೆ ಯವರು ಉಲ್ಲೇಖಿಸುತ್ತಾರೆ.[೬]

ಅತ್ತಿಗೆಯನ್ನು ಮೈದುನ ಭೋಗಿಸಬಹುದಾದರೂ, ಅದು ಅವನು ಇನ್ನೊಬ್ಬಳನ್ನು ಮದುವೆಯಾಗುವವರೆಗೆ ಮಾತ್ರ; ಅನಂತರ ಈ ಬಗೆಯ ಸಂಬಂಧಕ್ಕೆ ನಿಷೇಧವಿದೆ.

ಆ. ಭಾವ ಮೈದುನಿಯರ ಲೈಂಗಿಕ ಸಂಬಂಧಕ್ಕೆ ಈ ಜನಾಂಗಗಳಲ್ಲಿ ನಿಷೇಧವಿದೆ. ಭಾವ ಇವರಲ್ಲಿ ಪೂಜ್ಯ ಸ್ಥಾನ ದಲ್ಲಿ ನಿಲ್ಲುತ್ತಾನೆ. ಗಾಮೊಕ್ಕಲ ಮಹಾಭಾರತದ ಒಂದು ಸನ್ನಿವೇಶವನ್ನು ಗಮನಿಸಬಹುದು :

ಧರ್ಮರ ಕಥೆಯಲ್ಲಿ ದ್ರೌಪದಿಯು ತಲೆತಿರುಗಿ ಬಿದ್ದಾಗ ಕರ್ಣ ತನ್ನ ಹಚ್ಚಡದ ಸೆರಗಿನಿಂದ ಹಿಡಿದು ನಿಲ್ಲಿಸುತ್ತಾನೆ. ಎಚ್ಚತ್ತ ದ್ರೌಪದಿ,

---

೬ ಡಾ॥ ಎಲ್ ಆರ್. ಹೆಗಡೆ : ಗೊಂಡರ ಪದಗಳು (೧೯೭೭)ಪು ೫೦

"ಇದು ಏನು ಬಾವ್ನೋರೆ ಪಚ್ಚಡ ಸೆರಗೀಲಿ ತಡದ್ರಿ
ಗೋವ್ ಕಟ್ನಗುರ್ಣ ನಿಮಗು ಹೊಲೆಯೇನು"[೭]

ಎಂದು ಪ್ರಶ್ನಿಸುತ್ತಾಳೆ. ಆದಕ್ಕೆ ಕರ್ಣ ಉತ್ತರಿಸುತ್ತಾನೆ:

ಬಾವಾನು ಮಯ್ದುನಿಯು ಕಿಟ್ಬಾಬಾರಂದೇ
ಪಚ್ಚಡದ ಸೆರಗೀಲಿ ತಡದೀದೆ

ಬಾವ ಮೈದುನಿಯರ ಗೌರವಯುತ ಸಂಬಂಧವನ್ನು ಕರ್ಣನ ನುಡಿ ಎತ್ತಿ ತೋರಿಸುತ್ತದೆ. ಹೀಗೆ ಈ ಜನ ಲೈಂಗಿಕ ವಿಷಯದಲ್ಲಿ ಕೆಲವೆಡೆ ಮುಕ್ತ ಧೋರಣೆಯನ್ನು, ಮತ್ತೆ ಕೆಲವೆಡೆ ನಿಷೇಧ ಕ್ರಮವನ್ನು ಅನುಸರಿಸಿ, ಜೀವ ವಿಕಾಸಕ್ಕೆ ಅನುಕೂಲ ಹಾಗು ಆರೋಗ್ಯಕರ ಮಾರ್ಗವನ್ನು ಅನುಸರಿಸಿದ್ದನ್ನು ವಿವೇಕ ವುಳ್ಳವರು ಮೆಚ್ಚಲೇಬೇಕು.

೩. ಗಂಡನು ಸತ್ತಮೇಲೆ ಹೆಣ್ಣು ತನ್ನ ಮೈದುನನನ್ನು ಮದುವೆಯಾಗುವ ಸಂಪ್ರದಾಯ ಇವರಲ್ಲಿ ಹಿಂದಕ್ಕಿದ್ದಂತಿದೆ. ಗಾವೊಕ್ಕಲ ಮಹಾಭಾರತದಲ್ಲಿ ಅಭಿಮನ್ಯು ಸತ್ತಾಗ, ನಾರಾಯಣದೇವ (ಅಭಿಮನ್ಯುವಿನ ಮಾವ) ಅಭಿಮನ್ಯುವಿನ ತಮ್ಮಂದಿರಾದ 'ಸೀಗ್ರ'ರನ್ನು ಕುರಿತು, "ಓಲೆಯಿಲ್ಲದ ಅತ್ತಿಗೆ ಬರುತ್ತಾಳೆ, ಅವಳನ್ನು ಕೂಡುವಿರೇನು ?" ಎಂದು ಪ್ರಶ್ನಿಸುವುದನ್ನು ಮೆಲುಕು ಹಾಕಬೇಕು. ಹೀಗೆ ಪೌರಾಣಿಕ ಕತೆಗಳಲ್ಲಿ ಹುದುಗಿದ ಅನೇಕ ಸಾಮಾಜಿಕ ಸಂಪ್ರದಾಯಗಳನ್ನು ಪಟ್ಟಿಮಾಡಿಕೊಡಬಹುದು.

---

೭ ಗೋವಳ ವಂಶದವರಿಗೂ (ಗೋವಳ ಕೃಷ್ಣನ ತಂಗಿ ದ್ರೌಪದಿ) ನಿಮಗೂ ಹೊಲೆ- ಮೈಲಿಗೆಯೇನು ?

## ೭. ಶವ ಸಂಸ್ಕಾರ

ಹಾಲಕ್ಕಿ ಒಕ್ಕಲಿಗರಲ್ಲಿ ಸಾವು ಕುಟುಂಬ ಹಾಗೂ ಗ್ರಾಮಕ್ಕೆ ಮೈಲಿಗೆ ತರುತ್ತದೆ. ಶವಕ್ಕೆ ಸ್ನಾನಮಾಡಿಸುವ ಹಾಗೂ ಪೂಜೆಗೆ ಕೂಡಿಸುವ ಪದ್ಧತಿಯಿದೆ. ಸತ್ತವನ ಹಿರಿಯ ಮಗ ನಿಂದ ಇಲ್ಲವೆ ಸಮೀಪ ಸಂಬಂಧಿಯಿಂದ ಹೆಣಕ್ಕೆ ಕಾಯೊಡೆಸು ತ್ತಾರೆ. ಅನಂತರ ಗಳು ಮತ್ತು ಮಡಲಿನಿಂದ ತಯಾರಿಸಿದ ಚಟ್ಟದ ಮೇಲೆ ಹೆಣವನ್ನು ಮಲಗಿಸಿ, ಹುರಿಯಿಂದ ಬಿಗಿದು ಸ್ಮಶಾನಕ್ಕೊಯ್ಯುತ್ತಾರೆ. ಮೃತನು ತಿರುಪತಿಯ ಯಾತ್ರೆ ಮಾಡಿದವನಾದರೆ, ಹೆಣಕ್ಕೆ ತುಲಸಿಮಾಲೆ ಹಾಕಿ, ವಿಶೇಷ ವಾದ್ಯ ವೈಭವದಿಂದ ಕೊಂಡೊಯ್ಯುತ್ತಾರೆ. ಹೆಣವನ್ನು ಸುಡುವ ಪದ್ಧತಿಯಿದೆ.[೮] ಹೆಣವನ್ನು ಸುಟ್ಟು ಬರುವಾಗ ಹಿಂತಿರುಗಿ ನೋಡಬಾರದು. ಹೆಣ ಸುಡಲು ಹೋದವರು, ಕೆರೆಯಲ್ಲಿ ಇಲ್ಲವೆ ಹಳ್ಳದಲ್ಲಿ ಸ್ನಾನವನ್ನು ಮಾಡಿ ಸತ್ತವರ ಮನೆಗೆ ಹೋಗದೆ, ತಮ್ಮ ತಮ್ಮ ಮನೆಗಳಿಗೆ ಹೋಗಿ, ಸ್ನಾನವನ್ನು ಮಾಡಿ ಮನೆಯ ಒಳಪ್ರವೇಶಿಸುತ್ತಾರೆ. ಮರಣ ಸಂಭವಿಸಿದ ಮೂರ ನೆಯ ಇಲ್ಲವೆ ಐದನೆಯ ದಿನಕ್ಕೆ ಸ್ಮಶಾನಕ್ಕೆ ಹೋಗಿ, ಹೆಣದ ಬೂದಿಯನ್ನು ಒಟ್ಟುಮಾಡಿ, ಸುತ್ತ ಕಲ್ಲು ಹಾಕುತ್ತಾರೆ. ಸುಟ್ಟ ಸ್ಥಳದಲ್ಲಿ ತುಲಸಿಯ ಗಿಡವನ್ನು ನೆಡುವ ಸಂಪ್ರದಾಯ ಕೆಲವ ರಲ್ಲಿದೆ. ಅಂದು ಮಡಿವಾಳನಿಂದ ಕಾರ ಬೂದಿಯನ್ನು ತಂದು,

೮ ಗೊಂಡರಲ್ಲಿ ಹೆಣವನ್ನು ಹುಗಿಯುವ ಪದ್ಧತಿಯೂ ಇದೆಯೆಂದು ಡಾ॥ ಎಲ್. ಆರ್. ಹೆಗಡೆಯವರು ಹೇಳುತ್ತಾರೆ. ಗೊಂಡರ ಪದಗಳು (೧೯೭೭)ಪು. ನೋಡಿರಿ. ಆದರೆ ನನಗೆ ಮಾತ್ರ ಈ ಮಾಹಿತಿ ದೊರೆತಿಲ್ಲ.

ದಾಯಾದಿಗಳು ಸೂತಕದಿಂದ ಶುದ್ಧಿಯನ್ನು ಪಡೆಯುತ್ತಾರೆ. ಸತ್ತವರ ಮನೆಯವರು ಹನ್ನೊಂದನೆಯ ದಿನಕ್ಕೆ ಸೂತಕದಿಂದ ಮುಕ್ತಿಯನ್ನು ಪಡೆಯುತ್ತಾರೆ. ಸತ್ತ ಹನ್ನೆರಡನೆಯ ದಿನ ಹಾಗು ವರ್ಷಕ್ಕೆ ಪಾಯಸಾದಿ ವಿಶೇಷ ಅಡಿಗೆಯನ್ನು ಮಾಡಿ, ಸತ್ತವರ ಹೆಸರಿನಲ್ಲಿ ಇಷ್ಟರೊಬ್ಬರನ್ನು ಕರೆದು, ಬಂಧುಭಾಂದವರೊಡನೆ ಊಟ ಮಾಡುತ್ತಾರೆ. ಶವಸಂಸ್ಕಾರ ಹಾಗು ಕ್ರಿಯಾ ಕರ್ಮಗಳಿಗೆ ಬ್ರಾಹ್ಮಣರನ್ನು ಕರೆಯುವ ಸಂಪ್ರದಾಯವಿಲ್ಲ. ಇತ್ತೀಚಿಗೆ ಕೆಲವರು ಈ ಸಂಪ್ರದಾಯವನ್ನು ರೂಢಿಸಿಕೊಂಡಿದ್ದಾರೆ.

## ೮. ನಂಬಿಕೆ ಮತ್ತು ನಿಷೇಧಗಳು

ಗಿರಿವನ ಪ್ರದೇಶಗಳಲ್ಲಿ ಆಕಾಶದೆತ್ತರಕ್ಕೆ ಬೆಳೆದ ಗಿಡಮರಗಳು ಬದುಕಿಗೇ ಸವಾಲೊಡ್ಡುವ ಹಿಂಸ್ರ ಪಶುಗಳು, ಮೇಲಿಂದ ಮೇಲೆ ತೊಂದರೆಯನ್ನೊಡ್ಡುವ ಚಂಡಮಾರುತ, ಜ್ವಾಲಾಮುಖಿ, ಗುಡುಗು ಸಿಡಿಲುಗಳು ಮುಂತಾದವುಗಳ ಮಧ್ಯದಲ್ಲಿ ಬದುಕನ್ನು ಬಾಳುತ್ತಿದ್ದ ಈ ಜನರು ಪ್ರಕೃತಿಯ ನಿಗೂಢ ಶಕ್ತಿಯರಿಯದೆ ಭಯದಿಂದ ತತ್ತರಿಸಿದರು. ಅಜ್ಞಾನಕ್ಕೆ ಆತುಕೊಂಡೋ, ಮಾನಸಿಕ ಭ್ರಮೆಗೊಳಗಾಗಿಯೋ, ಹಲವಾರು ನಂಬಿಕೆ ನಿಷೇಧಗಳನ್ನು ಸೃಷ್ಟಿಸಿಕೊಂಡು, ಅದರ ಸುತ್ತಿದ ಸುಳಿಯಲ್ಲಿ ಸಿಲುಕಿದ್ದಾರೆ. ಭೂತ, ಪಿಶಾಚ, ಮಾಯ, ಮಂತ್ರಗಳಲ್ಲಿ ನಂಬಿಕೆಯಿಟ್ಟು, ಅದರ ಪ್ರಭಾವ ಪರಿಧಿಯಿಂದ ಹೊರಬರಲಾರದ ಸ್ಥಿತಿಯಲ್ಲಿದ್ದಾರೆ ಇವರಲ್ಲಿ ಪ್ರಚಲಿತವಿರುವ ನಂಬಿಕೆ ಮತ್ತು ನಿಷೇಧಗಳು ಹಲವಾರು :

ಮದುವೆಯಾಗದೆ ಸತ್ತವರು ಕನ್ನೆಕೊಲೆಯಾಗುತ್ತಾರೆ: ಅವರು ಚಾಳ್ಯ ಪಿಶಾಚಿಗಳಾಗುತ್ತಾರೆ. ಬಾಣವತಿಯಾಗಿ ಸತ್ತವರು ಅಡ್ಡಬಾಳಂತಿ ದೆವ್ವವಾಗುತ್ತಾರೆ. ಅಪಮೃತ್ಯುವಿಗೀಡಾದವರು ಪಿಶಾಚಿಗಳಾಗುತ್ತಾರೆ. ಈ ಪಿಶಾಚಿ ಮತ್ತು ದೆವ್ವಗಳ ಪಾದ ತಿರುಚಿರುತ್ತದೆ. ಹುಣಸೆ ಮತ್ತು ಆಲದ ಮರಗಳಲ್ಲಿ ದೆವ್ವ ಪಿಶಾಚಿಗಳು ವಾಸಿಸುತ್ತವೆ ಎಂದು ನಂಬುತ್ತಾರೆ. ಭೂತ ಪಿಶಾಚಿಗಳನ್ನು ಮಂತ್ರಗಾರ, ಗಾಡಗ, ವೈದ್ಯರಿಂದ ಕಟ್ಟಿ ಹಾಕದಿದ್ದಲ್ಲಿ ಅವು ಜನರಿಗೆ ಪೀಡೆಯನ್ನು ಕೊಡುತ್ತವೆ. ನಾಗಬೆತ್ತ, ಮತ್ತು ಚಪ್ಪಲಿಗಳಿಗೆ ಭೂತಗಳು ಹೆದರುತ್ತವೆ, ಆದ್ದರಿಂದ ನಾಗಬೆತ್ತ ಚಪ್ಪಲಿಗಳಿದ್ದಲ್ಲಿ, ಭೂತ ಬಾಧೆಯಿಂದ ವಿಮುಕ್ತಿ ಪಡೆಯಬಹುದು.

ನಾಗದೇವತೆಯನ್ನು ಭಕ್ತಿ ಗೌರವದಿಂದ ಕಾಣಬೇಕು: ಇಲ್ಲದಿದ್ದರೆ ಆ ದೇವತೆ ತುರಿಕೆ ಮುಂತಾದ ಚರ್ಮರೋಗಗಳನ್ನು ತರುತ್ತದೆ. ನಾಗದೇವತೆಗೆ ಹರಕೆ ಕಟ್ಟಿದಲ್ಲಿ ಚರ್ಮವ್ಯಾಧಿ ಗುಣವಾಗುತ್ತದೆಯೆಂಬ ನಂಬಿಕೆಯಿದೆ. ಮಾದರಿಯಮ್ಮ, ಜಟ್ಟಿಗ, ಬೀರ ದೇವತೆಗಳಿಗೆ ವರ್ಷ ವರ್ಷವೂ ಕೋಳಿ, ಕುರಿಗಳ ಬಲಿಕೊಡಬೇಕು. ಬಲಿಯಿಂದ ಅವುಗಳ ರಕ್ತ ಪಿಪಾಸೆಯನ್ನು ಹಿಂಗಿಸಿದಲ್ಲಿ, ಅವು ತಮ್ಮನ್ನು ರಕ್ಷಿಸುತ್ತವೆ. ಇಲ್ಲದಿದ್ದಲ್ಲಿ ಸಾಂಕ್ರಾಮಿಕ ಪಿಡುಗುಗಳನ್ನು ಹಬ್ಬಿಸಿ, ಮಾನವ ಹಾಗೂ ಜಾನುವಾರಗಳ ಸಂಹಾರದ ಮೂಲಕ ತಮ್ಮ ರಕ್ತ ದಾಹವನ್ನು ತೀರಿಸಿಕೊಳ್ಳುತ್ತವೆ. ಕೋಳಿಯಂಕ, ಬೇಟೆ ಆಗದಿದ್ದಲ್ಲಿ ಬ್ಯಾಟೀಬೀರ, ಅಂಕದೇವತೆಗಳು ಮುನಿದು ಕುಟುಂಬ

ಸೌಖ್ಯವನ್ನು ಹಾಳಗೈಯ್ಯುತ್ತವೆ, ಅದಕ್ಕಾಗಿ ವರ್ಷಕ್ಕೊಮ್ಮೆ ಬೇಟೆ, ಕೋಳಿಅಂಕ ಆಡಲೇಬೇಕು ಎಂಬ ನಂಬಿಕೆಯಿದೆ.

ಹಾಲಕ್ಕಿ ಒಕ್ಕಲಿಗರು ತಮ್ಮನ್ನು ಪಾಂಡವರ ಕುಲದವರೆಂದು ಭಾವಿಸುತ್ತಾರೆ. ಗೋಕರ್ಣದ ಮಹಾಬಲೇಶ್ವರ ದೇವಾಲಯವನ್ನು ಪಾಂಡವರೇ ಕಟ್ಟಿದ್ದೆಂದು ಅವರು ನಂಬುತ್ತಾರೆ. ಅಡವಿಯ ಕಡವೆ, ಗಂವೆ. ಸೀಸೆಕುನ್ನಿಗಳನ್ನು ಪಾಂಡವರು ಸಾಕಿದ ದನ, ಕೋಣ ಮತ್ತು ನಾಯಿಗಳೆಂದು ತಿಳಿಯುತ್ತಾರೆ. ಬೆಟ್ಟದ ಕಲ್ಲುಬಾಳೆಯು ಪಾಂಡವರು ನೆಟ್ಟ ಬಾಳೆಯೆನ್ನುತ್ತಾರೆ. ಸೀನೆ ಕುನ್ನಿಯು ಪ್ರಾಣಿ ಬೇಟೆಯನ್ನಾಡಿ ತಿನ್ನುವಾಗ, ಅದರ ಮೇಲೆ ಸೊಪ್ಪನ್ನೊಗೆದು ಕೈಮುಗಿದರೆ, ಬೇಟೆಯ ಪ್ರಾಣಿಯನ್ನು ಬಿಟ್ಟು ಹೋಗುತ್ತದೆಂದು ಹೇಳುತ್ತಾರೆ. ಉಡದ ಮಾಂಸವನ್ನು ಅಡಗಿಸಿದಷ್ಟೂ ಹೆಚ್ಚಾಗುತ್ತದೆ ಎಂಬ ನಂಬಿಕೆಯುಳ್ಳವರು ಇವರು.

ಬಲೀಂದ್ರನು ಹಾಲಕ್ಕಿ ಗೌಡ, ಭೂಮಿ ಪುತ್ರನೆಂದು ತಿಳಿಯುತ್ತಾರೆ. ಸುಗ್ಗಿಯನ್ನು ಕಟ್ಟಿದರೆ, ಊರಿಗೆ ಶುಭವಾಗುತ್ತದೆ; ರೋಗ ಕಾಲ್ಕೀಳುತ್ತದೆ. ತಾರ್ಲೆ ಕುಣಿದರೆ ಮಳೆಯಾಗುತ್ತದೆ ಹೀಗೆ ಹಲವಾರು ನಂಬಿಕೆಗಳಿವೆ.

### ೯. ನಿಷೇಧಾತ್ಮಕ ಸಂಬಿಕೆಗಳು:

ಸರ್ಪವನ್ನು ಹೊಡೆಯಬಾರದು; ಹೊಡೆದರೆ ನೋಯಿಸಿ ಬಿಡಬಾರದು, ಮೋಜಾತಿ(ದನ)ಯನ್ನು ಹೊಡೆಯಬಾರದು. ಕೊಟ್ಟಿಗೆಯಲ್ಲಿ ದನಕ್ಕೆ ಶಾಪಹಾಕಬಾರದು. ಈ ನಂಬಿಕೆಯು

ಹಿನ್ನೆಲೆಯಲ್ಲಿ ಜನ್ಮತಳೆದ ಹುಲಿ ಕಪ್ಲೆ ಹಾಡೊಂದಿದೆ ಎಮ್ಮೆಯ ಸಗಣಿಯಿಂದ ಮನೆಯನ್ನು ಸಾರಿಸಬಾರದು. ಬೆಕ್ಕು, ನಾಯಿ, ಕಪ್ಪೆ, ಮಂಗಗಳನ್ನು ಕೊಲ್ಲಬಾರದು. ವೃಕ್ಷವನ್ನು ಒಂದೂ ಟೊಂಗೆ ಬಿಡದೆ ಬೋಳಿಸಬಾರದು, ಮೈನೆರೆದ ಕನ್ನೆಯನ್ನು ಮನೆಯಲ್ಲಿಟ್ಟುಕೊಳ್ಳಬಾರದು. ಬತ್ತಲೆಯ ಹೆಂಗಸನ್ನು ನೋಡ ಬಾರದು. ತಮ್ಮನ ಹೆಂಡತಿಯನ್ನು ಕೂಡಕೂಡದು. ಒಂದೇ ಬಳ್ಳಿಯವರನ್ನು ಮದುವೆಯಾಗಬಾರದು, ಮೈಲಿ ಬೇನೆಯಿಂದ ಸತ್ತವರನ್ನು ಸುಡಬಾರದು. ಸೂತಕದಲ್ಲಿ ದೇವರ ಮನೆಯನ್ನು ಪ್ರವೇಶಿಸಬಾರದು ಮತ್ತು ದೇವರ ಪೂಜೆಯನ್ನು ಮಾಡ ಬಾರದು. ವಿಧವೆಯನ್ನು ಮದುವೆಯಾದವರು ದೇವರ ಪೂಜೆ ಯನ್ನು ಮಾಡಬಾರದು ಇತ್ಯಾದಿ– ನಿಷೇಧಾತ್ಮಕ ನಂಬಿಕೆಗಳ ಬಂಧನದಲ್ಲಿ ತಮ್ಮ ಬದುಕನ್ನು ರೂಪಿಸ ಹೊರಟಿದ್ದಾರೆ.

## ೧೦. ವೈದ್ಯ :

ವನಸ್ಪತಿ ಮತ್ತು ಪ್ರಾಣಿಜನ್ಯ ಮದ್ದು ಕೊಡುವುದರಲ್ಲಿ ಇವರು ನಿಸ್ಸೀಮರು. ತಮ್ಮ ಸುತ್ತು ಮುತ್ತಲಿನ ಗಿಡ ಮರ ಗಳ ಗುಣಾವಗುಣಗಳನ್ನು ನೋಡಿ, ಅವುಗಳ ಔಷಧೀಯ ಗುಣಗಳನ್ನು ನಿರೀಕ್ಷೆ, ಪರೀಕ್ಷೆ ಮತ್ತು ಪ್ರಯೋಗಗಳಿಂದ ಕಂಡು ಹಿಡಿದು, ಅವನ್ನು ತಮ್ಮ ಆರೋಗ್ಯ ವರ್ಧನೆಗಾಗಿ ಬಳಸಿ ಕೊಂಡಿದ್ದಾರೆ. ರೋಗವಿನ ಹುಟ್ಟಡಗಿಸಿ ಆರೋಗ್ಯಕರ ಬದು ಕನ್ನು ಬಾಳುವ ಹೇತುವಿನಿಂದ ಹಲವಾರು ಮದ್ದುಗಳನ್ನು ಕಂಡು ಹಿಡಿದಿದ್ದಾರೆ. ಇವರ ವೈದ್ಯದಲ್ಲಿ (ಅ) ಸಹಜ ವೈದ್ಯ (ಆ) ಮಂತ್ರ ವೈದ್ಯಗಳೆಂದು ಎರಡು ಪ್ರಕಾರಗಳನ್ನು ಮಾಡ ಬಹುದು.

## ಅ. ಸಹಜ ವೈದ್ಯ:

ವನಸ್ಪತಿ, ಪ್ರಾಣಿ ಹಾಗು ಧಾತು ಜನ್ಯ ಔಷಧಗಳು ಸಹಜ ವೈದ್ಯದಲ್ಲಿ ಬರುತ್ತವೆ. ಸಹಜ ವೈದ್ಯದಲ್ಲಿ ಪಳಗಿದವರು ಪ್ರತಿ ಊರಲ್ಲಿ ಇದ್ದೇ ಇರುತ್ತಾರೆ. ಸಣ್ಣಪುಟ್ಟ ಕಾಯಿಲೆ ಕಸಾಲೆಗಳಿಗೆ ಊರಿನ ಬಡಜನರು ದುಬಾರಿಯ ನಗರ ವೈದ್ಯರನ್ನು ಆಶ್ರಯಿಸುವ ಬದಲು, ಸಂಸಾರದ ಈ ಗಾಂವಟಿ ಮದ್ದುಗಾರರನ್ನು ಆಶ್ರಯಿಸುತ್ತಾರೆ. ಕೆಲವು ಗಾಂವಟಿ ವೈದ್ಯರು ತಮ್ಮ ಊರಲ್ಲಷ್ಟೇ ಅಲ್ಲ ನಾಡು, ರಾಷ್ಟ್ರ, ಅಂತಾರಾಷ್ಟ್ರ ಮಟ್ಟದಲ್ಲಿ ಖ್ಯಾತಿಗಳಿಸಿದ್ದಾರೆ. ಬೆಳಂಬಾರದ ಗೌಡರು ಅರ್ಧಾಂಗ ವಾಯುವಿಗೆ, ತೋಡೂರು ಗೌಡರು ಮುರಿದ ಎಲುಬು ಕೂಡಿಸಲು ಕೊಡುವ ಮದ್ದುಗಳು ಜಗದ್ವಿಖ್ಯಾತಿಯನ್ನು ಪಡೆದಿವೆ. ಸುಪ್ರಸಿದ್ಧ ನಗರ ವೈದ್ಯರಿಂದ ಪರಿಹಾರವನ್ನು ಕಾಣದ ಅನೇಕರು ಇವರಿಂದ ಗುಣಮುಖರಾಗಿದ್ದಾರೆ. ರೋಗ ನಿವಾರಕ ಮತ್ತು ರೋಗ ನಿರೋಧಕ ಶಕ್ತಿಯುಳ್ಳ ಇವರ ಕೆಲವು ಮದ್ದುಗಳು, ವೈದ್ಯ ವಿಜ್ಞಾನಿಗಳನ್ನೂ ವಿಸ್ಮಿತರನ್ನಾಗಿ ಮಾಡಿವೆ. ಬೇಸರದ ಸಂಗತಿಯೆಂದರೆ, ಇವರು ತಮಗೆ ತಿಳಿದ ಮದ್ದನ್ನು ಬೇರೊಬ್ಬರಿಗೆ ಹೇಳುವುದಿಲ್ಲ. ತಮ್ಮ ಕೊನೆಗಾಲದಲ್ಲಿ ಹಿರಿಯ ಮಗನಿಗೆ ಇಲ್ಲವೆ ತಮಗೆ ವಿಶ್ವಾಸವುಳ್ಳ ಕುಟುಂಬದ ಇನ್ನೊಬ್ಬ ಸದಸ್ಯನಿಗೆ ಮಾತ್ರ ಔಷಧಿ ರಹಸ್ಯವನ್ನು ಹೇಳುತ್ತಾರೆ. ಇವರ ಮರಣ ಕಾಲದಲ್ಲಿ ಹತ್ತಿರ ಯಾರೂ ಇಲ್ಲದಿದ್ದರೆ ಇಲ್ಲವೆ ಮದ್ದಿನ ವಿವರವನ್ನು ಕುರಿತು ಹೇಳಲಿಕ್ಕಾಗದಂತೆ ಆತ ಒಮ್ಮೆಲೇ ತೀವ್ರ ಕಾಯಿಲೆಗೊಳಗಾದರೆ, ಅವನ

ಬೆನ್ನು ಹಿಂದೆಯೇ, ಅವನು ತಿಳಿದ ಮದ್ದೂ ಕೂಡ ಮಸಣದ ಪಾಲಾಗುತ್ತದೆ. ಇಂತಹ ಹಲವಾರು ನಿದರ್ಶನಗಳಿವೆ. ಮದ್ದಿನ ವಿವರವನ್ನು ಹೇಳಿದರೆ, ಅದರ ತೀವ್ರ ಪರಿಣಾಮ ಕಡಿಮೆಯಾಗುವುದೆಂಬ ಮೂಢ ನಂಬಿಕೆಯೇ ಹಾಗೆ ಹೇಳದಿರಲು ಕಾರಣ. ತಮ್ಮ ಮದ್ದಿನ ಗುಟ್ಟು ಇತರರಿಗೆ ಹೇಳಿದರೆ, ಮನೆತನದ ಮೂಲವೃತ್ತಿಗೆ ತೊಡಕಾಗಬಹುದೆಂಬ ಹೆದರಿಕೆಯೂ ಇದಕ್ಕೆ ಇನ್ನೊಂದು ಕಾರಣವಾಗಿದೆ. ಅದೇನೇ ಇದ್ದರೂ ಈ ಮನೋಭಾವನೆಯಿಂದ ಮಸುಕುಲಕ್ಕೆ ಶಾಪದಂತೆ ಕಾಡುತ್ತಿರುವ, ಕ್ಯಾನ್ಸರಿನಂತಹ ರೋಗಗಳಿಗೆ ತೀವ್ರ ಪರಿಣಾಮಕಾರಿಯಾದ ಔಷಧಗಳೂ ಕೂಡ ನಮ್ಮ ಕೈಬಿಟ್ಟು ಹೋಗುತ್ತಲಿವೆಯೆಂದು ವ್ಯಸನದಿಂದ ಹೇಳಬೇಕಾಗುತ್ತದೆ.

ತಮ್ಮ ಮದ್ದಿಗೆ ಬೇಕಾದ ಗಿಡ ಮೂಲಿಕೆಗಳನ್ನು ಇವರು ತೋಟದಲ್ಲಿ ಬೆಳೆದೋ, ಸಮೀಪದ ಕಾಡಿನಿಂದ ತಂದೋ ಮದ್ದು ತಯಾರಿಸುತ್ತಾರೆ. ಮದ್ದಿಗೆ ಬೇಕಾಗುವ ಸೊಪ್ಪು, ಬೇರುಗಳನ್ನು ತರುವಾಗ ಇನ್ನೊಬ್ಬರಿಗೆ ಕಾಣದಂತೆ ಎಚ್ಚರಿಕೆ ವಹಿಸುತ್ತಾರೆ. ಇವರು ಕೊಡುವ ಎಲ್ಲ ಮದ್ದುಗಳೂ ತೀವ್ರ ಪರಿಣಾಮಕಾರಿಯೆಂದು ಹೇಳಲಾಗದು. ಕೆಲವೊಮ್ಮೆ ಇವರು ಕೊಡುವ ಮದ್ದು ರೋಗಿಯ ಮೇಲೆ ವಿರುದ್ಧ ಪರಿಣಾಮವನ್ನು ಮಾಡಿ, ಕಾಯಿಲೆ ಉಲ್ಬಣಿಸುವುದೂ ಇಲ್ಲದಿಲ್ಲ. ಇಂಥ ಸಮಯದಲ್ಲಿಯೂ ಅನೇಕರು ತಜ್ಞ ವೈದ್ಯರೆಡೆಗೆ ಹೋಗುವುದಿಲ್ಲ. ಆಗ ಅವರು ಮಂತ್ರ ವೈದ್ಯವನ್ನು ಆಶ್ರಯಿಸುತ್ತಾರೆ.

## ಅ. ಮಂತ್ರ ವೈದ್ಯ:

ಮಾಟ ಮಂತ್ರಗಳನ್ನು ಆದರಿಸಿದ ಚಿಕಿತ್ಸೆಯನ್ನು ಮಂತ್ರ ವೈದ್ಯವೆನ್ನಬಹುದು. ಮಂತ್ರ ವೈದ್ಯವು ಮನೋವೈಜ್ಞಾನಿಕ ಹಿನ್ನೆಲೆಯುಳ್ಳದ್ದಾಗಿದೆ. ಹಾಲಕ್ಕಿ ಒಕ್ಕಲಿಗರಲ್ಲಿ ಮಾಟ ಮಂತ್ರಗಳಲ್ಲಿ ಪಳಗಿದ ವೈದ್ಯ, ಗಾಡಗ, ಗುನಗರೆಂಬ ಮಾಂತ್ರಿಕರಿರುತ್ತಾರೆ. ಅವರು ಕವಡೆಯನ್ನು ನೋಡಿಯೋ, ಅಕ್ಕಿ ಕಾಳಿನ ಲೆಕ್ಕ ಹಾಕಿಯೋ ಮೈಮೇಲೆ ದೇವರನ್ನು ಆವಾಹನೆ ಮಾಡಿಕೊಂಡೋ 'ಗಾಡಗತನ ಹೊಡೆದು' ಬೂತಗಳನ್ನು ಕಡಿದೋ,[೯] ದೆವ್ವಗಳನ್ನು ಕಟ್ಟಿಹಾಕಿಯೋ, ರೋಗ ಪರಿಹಾರ ಮಾಡಲೆತ್ನಿಸುತ್ತಾನೆ. ತೀವ್ರ ಕಾಯಿಲೆಗಳಿಗೆ ಭೂತ, ಪಿಶಾಚಿಗಳ ಪೀಡೆಯೇ ಕಾರಣವೆಂದು ಬಗೆದು, ಕೋಮಾರ ಪಂತರ ಮಂಡಕ್ಕೆ ಹೋಗಿ ಇಲ್ಲವೆ ಬಂಡಿಹಬ್ಬದಲ್ಲಿ ಕಳಸವನ್ನು ಹೊತ್ತ ಗುನಗನಿಗೆ ವಿಚಾರ ಹಾಕಿ, ರೋಗ ವಿಮುಕ್ತಿಯ ಮಾರ್ಗ ಕಂಡುಕೊಳ್ಳುವವರೂ ಇದ್ದಾರೆ. ಕೆಲವರು ಗ್ರಾಮದೇವತೆಗಳಲ್ಲಿ ಗುನಗನಿಂದ ಮಡವಿ ಪ್ರಸಾದವನ್ನು ಕೇಳಿ ಇಲ್ಲವೆ ಗ್ರಾಮದೇವತೆಗಳಿಗೆ ಕೋಳಿ, ಕುರಿಗಳ ಹರಕೆಯನ್ನು ಹೊತ್ತು ರೋಗ ಬಿಡುಗಡೆಗಾಗಿ ಪ್ರಾರ್ಥಿಸುತ್ತಾರೆ. ಸಾಂಕ್ರಾಮಿಕ ರೋಗಕ್ಕೆ ತುತ್ತಾದರೆ, ಯಾವ ಔಷಧ

---

[೯] ಗಾಡಗನು ಮೈಮೇಲೆ ಭಾರ ತರಿಸಿಕೊಂಡು, ಭೂತೋಚ್ಚಾಟನೆಯ ಮಂತ್ರಗಳನ್ನು ಹೇಳುತ್ತಾ ವಿವಿಧ ವನಸ್ಪತಿಗಳನ್ನು ಮಣೆಯ ಮೇಲಿಟ್ಟುಕೊಂಡು ಕತ್ತಿಯಿಂದ ಕಡಿಯುತ್ತಾನೆ. ಗಾಡಗ ಭೂತಗಳನ್ನು ವನಸ್ಪತಿಯಲ್ಲಿ ಬಂಧಿಸಿ ಕಡಿದು ಹಾಕುತ್ತಾನೆಂದು ರೋಗಿಗಳ ನಂಬಿಕೆ.

ವನ್ನೂ ಮಾಡದೆ, ಅಮ್ಮ ಇಲ್ಲವೆ ಮಾರಿಕಾಂಬೆಗೆ ಹರಕೆಯನ್ನು ಹೊತ್ತೇ ರೋಗ ವಿಮುಕ್ತಿ ಪಡೆಯಲು ಆಶಿಸುತ್ತಾರೆ. ಬೆಳೆಗಳಿಗೆ ತೀವ್ರ ರೋಗ ತಟ್ಟಿದರೆ ಹೊಗೆ ಹಾಕಿ, ಮಾಂತ್ರಿಕ ಉಪಾಸನೆಯಿಂದ ರೋಗವನ್ನು ತಡೆಗಟ್ಟುವ ವಿಧಾನವೂ ಹಿಂದಕ್ಕೆ ಬಳಕೆಯಲ್ಲಿತ್ತಂತೆ. ಈಗ ಆ ಬಗೆಯ ಮಾಟದ ವಿಧಾನ ಇವರಿಗೆ ಮರೆತು ಹೋಗಿದೆ. ಹೀಗೆ ಬುಡಕಟ್ಟು ಜನಾಂಗದವರು ತಮ್ಮ ರೋಗ ವಿಮುಕ್ತಿಗೆ ಮೇಲೆ ವಿವರಿಸಿದ ಎರಡು ವೈದ್ಯಕೀಯ ಮಾರ್ಗಗಳನ್ನು ಹೆಚ್ಚಾಗಿ ಅವಲಂಬಿಸಿದರು. ಈಗ ನಾಗರಿಕತೆ ಬೆಳೆದ ಪ್ರದೇಶಗಳಲ್ಲಿ ಮಾತ್ರ ತಜ್ಞ ವೈದ್ಯರನ್ನು ಆಶ್ರಯಿಸುತ್ತಿದ್ದಾರೆ.

೩

# ಧಾರ್ಮಿಕ ಆಚರಣೆ, ಕಲೆ ಮತ್ತು ಕ್ರೀಡೆಗಳು

## ೧. ಮತ:

ಒಕ್ಕಲು ಬುಡಕಟ್ಟಿನವರೆಲ್ಲ ಇಂದು ವೈಷ್ಣವ ಮತಾವಲಂಬಿಗಳು. ಹಾಲಕ್ಕ ಒಕ್ಕಲಿಗರು ಮಾತ್ರ ಕೆಲಕಾಲ ವೀರಶೈವರ ಪ್ರಭಾವಕ್ಕೊಳಗಾಗಿ ವೀರಶೈವ ಮತಕ್ಕಂಟಿಕೊಂಡಿದ್ದರು. ಸುಗ್ಗಿಯ ಕೋಲಾಟದ ಕಾಲಕ್ಕೆ ಇವರು ಸುಗ್ಗಿಯ ಕರಿಕಳವಲ್ಲಿ ಮಾದೇವರಾಯ ಮತ್ತು ಬಸವೇಶರಾಯರಿಗೆ ನೀಡುವ ಆದ್ಯತೆ ಮತ್ತು ವೀರಶೈವ ಜಂಗಮರಿಗೆ ಕೊಡುವ ಮರ್ಯಾದೆಗಳು ಇವರ ಶೈವ ನಿಷ್ಠೆಗೆ ನಿದರ್ಶನಗಳು. ವೀರಶೈವ ಮತದ ಪ್ರಭಾವ ಕರಾವಳಿಯಲ್ಲಿ ಕಡಿಮೆಯಾದ ಮೇಲೆ, ಇವರು ಆ ಮತವನ್ನು ತ್ಯಜಿಸಿ, ವೈಷ್ಣವ ಮತದೆಡೆಗೆ ವಾಲಿದರು. ಇಂದು ಒಕ್ಕಲಿಗ ಬುಡಕಟ್ಟಿನವರೆಲ್ಲರ ಮನೆಯ ಮುಂದೆ ತುಲಸಿಕಟ್ಟೆಗಳು ಇಲ್ಲವೆ ತುಲಸಿ ಮನೆಗಳಿವೆ. ಇವರ ಕುಲದೇವತೆಯು ತಿರುಪತಿಯ ವೆಂಕಟರಮಣ. ಇವರು ತಮ್ಮ ಬದುಕಿನ ಪರಮಾರ್ಥವನ್ನು ಕಾಣುವುದು ತಿರುಪತಿಯ ಯಾತ್ರೆಯಲ್ಲಿ, ತಿರುಪತಿ ಯಾತ್ರೆ ಮಾಡಿ ಬಂದವನಿಗೆ ದಾಸನೆಂದು ಕರೆದು ಅವನಿಗೆ ವಿಶೇಷ ಮರ್ಯಾದೆಯನ್ನು ಸಲ್ಲಿಸುತ್ತಾರೆ.

## ೨. ಬಹುದೇವತಾರಾಧನೆ:

ಇವರು ಯಾವ ಕಾಲಕ್ಕೂ ಒಂದೇ ದೇವತೆಯನ್ನು ನಂಬಿ ಕುಳಿತವರಲ್ಲ. ಒಂದೊಂದು ಕಾರಣಕ್ಕಾಗಿ ಒಂದೊಂದು ದೇವತೆಗೆ ಹರಕೆಯನ್ನು ಹೊರುತ್ತಾರೆ, ಅದನ್ನು ಆರಾಧಿಸಿ ತಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸುತ್ತಾರೆ. ಹೀಗಾಗಿ ಅವರು ಪೂಜಿಸುವ ದೇವತೆಗಳು ಹಲವಾರು. ಅವರು ಪೂಜಿಸುವ ದೇವತೆಗಳನ್ನು ಐಯ್ದು ಗುಂಪುಗಳಾಗಿ ವಿಂಗಡಿಸಬಹುದು.

### ಅ. ವೃಕ್ಷ ದೇವತೆಗಳು

ಕಾಡಿನ ಗಿಡಮರಗಳ ಆಶ್ರಯದಲ್ಲಿ ಬೆಳೆದ ಈ ಕಾಡಾಡಿಗಳು ಎತ್ತರವಾಗಿ ಬೆಳೆದಂತಹ ವೃಕ್ಷಗಳ ಭವ್ಯತೆ, ಮರಕ್ಕೆ ಮರ ತಿಕ್ಕಿ ಉಂಟಾಗುವ ಬೆಂಕಿ ಅದರಿಂದ ಸುಡುವ ಕಾಡು, ಚಂಡಮಾರುತದ ಹೊಡೆತಕ್ಕೆ ಸಿಕ್ಕು, ಭೀಕರ ಸಪ್ಪಳ ಮಾಡಿ ಮುರಿದು ಬೀಳುವ ಮರ, ಇವೆಲ್ಲವನ್ನು ಕಂಡು ಭಯಕಂಪಿತರಾದರು. ಜೊತೆಗೆ ತಮಗೆ ಅನ್ನ ಆಶ್ರಯಗಳನ್ನು ನೀಡುವ ಈ ವನಸ್ಪತಿಗಳ ಉಪಕಾರಕ್ಕೆ ಭಕ್ತಿಯಿಂದ ಕೈಮುಗಿದರು. ಹೀಗೆ ಭಯ ಹಾಗೂ ಭಕ್ತಿಯಿಂದ ಬುಡಕಟ್ಟು ಒಕ್ಕಲಿಗರು ಪೂಜಿಸುವ ಗಿಡಮರಗಳು ಹಲವಾರು. ತುಲಸಿ, ಆಲ, ಅರಳಿ, ಅತ್ತಿ, ತೆಂಗು, ಮಾವು, ಹೊನ್ನೆ, ಹೊನಗಿಲು, ಬತ್ತದ ಸಸಿ,ಉತ್ತರಾಣಿ, ಕಡವಣಕಿ ಹೀಗೆ ಅವರು ಪೂಜಿಸುವ ಗಿಡ ಮರಗಳ ಸಂಖ್ಯೆ ಬೆಳೆಯುತ್ತಲೇ ಹೋಗುತ್ತದೆ. ಈ ದೇವತೆಗಳ ಹೆಸರಿನಲ್ಲಿ ಕೆಲವು ಹಬ್ಬಗಳನ್ನೂ ಆಚರಿಸುವರು. ವನಸ್ಪತಿದೇವತೆಗಳ ಹೆಸರಿನಲ್ಲಿ ಹಬ್ಬಗಳಲ್ಲಿ ತುಲಸಿಯ ಹಬ್ಬ, ಗದ್ದೆ ಗಂಡ, ಬಲೀಂದ್ರನ ಹಬ್ಬ, ಹೊಸತು, ಹೊಸಕ್ಕಿ, ಸುಗ್ಗಿಯ ಹಬ್ಬ ಮುಂತಾದವು ಮುಖ್ಯವಾಗಿವೆ.

## ೧. ತುಲಸಿಯ ಹಬ್ಬ :

ಒಕ್ಕಲು ಮಕ್ಕಳೆಲ್ಲ ತಿರುಪತಿಯ ವೆಂಕಟರಮಣನ ಆರಾಧಕರು. ತುಲಸಿಯು ವೆಂಕಟರಮಣನ ಆವಾಸಸ್ಥಾನ, ಆದ್ದರಿಂದ ಗೊಂಡರಾದಿಯಾಗಿ ಎಲ್ಲ ಒಕ್ಕಲಿಗರಿಗೂ ತುಲಸಿಯ ಹಬ್ಬವು ಅತಿ ಮುಖ್ಯ ಹಬ್ಬಗಳಲ್ಲೊಂದು. ಅಂದು ತುಲಸಿಗೆ ಕಬ್ಬನ್ನು ನಿಲ್ಲಿಸಿ ಬಗೆ ಬಗೆಯ ಹೂಮಾಲೆ ಹಾಗು ಗೊಂಚಲುಗಳಿಂದ ಸಿಂಗರಿಸಿ, ಮಣಸಿ ಹಾಗು ನೆಲ್ಲಿಕಾಯಿಯನ್ನು ವೃಂದಾವನದಲ್ಲಿಟ್ಟು 'ಗೋವಿಂದಾ' ಎಂದು ಗೋವಿಂದನನ್ನು ನೆನೆಯುವರು. ಈ ಸಂದರ್ಭದಲ್ಲಿ ಬಾಳೆಯ ಹಂಬೆಯಿಂದ ಸುಂದರವಾದ ಮಂಟಪವನ್ನು ಕಟ್ಟಿ, ವಿಶೇಷ ಪೂಜೆ ಸಲ್ಲಿಸುವ ಪದ್ಧತಿಯೂ ಕೆಲವೆಡೆ ಉಂಟು. ಈ ಹಬ್ಬವನ್ನು ತುಲಸಿಯ ಮದುವೆಯೆಂದೂ ಕರೆಯುತ್ತಾರೆ.

## ೨. ಬಲೀಂದ್ರನ ಹಬ್ಬ (ದೀಪಾವಳಿ) :

ದೀಪಾವಳಿಯಲ್ಲಿ ಕೃಷಿಸ್ವಾಮಿಯಾದ ಬಲೀಂದ್ರನನ್ನು ಪೂಜಿಸುತ್ತಾರೆ. ಮನೆಯ ಒಳಕೋಣೆಯ "ಮುಂಡ್ಕಿನ ಕೊಂಬಿ"ನ ಮುಂದೆ ಎರಡು ಕೋಲುಗಳನ್ನು ಕಟ್ಟಿ, ಅದಕ್ಕೆ ಕವರಿಗೆ ಪಟ್ಟಿಯಿಂದ ಹೂವು, ಮೊಗೆಕಾಯಿ, ಅಡಿಕೆಯ ಕೊನೆ, ಶಿಂ(ಹಿಂ)ಡ್ಲಿಕಾಯಿ ಮುಂತಾದವುಗಳನ್ನು ತೂಗಿ, ಅದರ ಕೆಳಗೆ ಮಣೆಯ ಮೇಲೆ ಹೊಸ ಬತ್ತ ಹಾಕಿ, ಅದರ ಮೇಲೆ ಹಿತ್ತಾಳೆಯ ಚೆಂಬನ್ನಿಟ್ಟು, ನೀರು ಹೊಯ್ದು, ಚೆಂಬಿನ ತಲೆಯ ಮೇಲೆ ಸಿಂಗಾರ ಕೊನೆಯಿಡುತ್ತಾರೆ. ಅದೇ ಬಲೀಂದ್ರ. ಕೆಲವರು ಜೇಡಿಯ ಮಣ್ಣಿನಿಂದ ಬಲೀಂದ್ರನ ಮೂರ್ತಿಯನ್ನು

ಮಾಡುತ್ತಾರೆ. ಬಲೀಂದ್ರನ ಪೂಜೆಯನ್ನು ಮೂರು ದಿನಗಳ ವರೆಗೆ ಮಾಡಿ ವಿಸರ್ಜಿಸುತ್ತಾರೆ. ಬಲೀಂದ್ರನ ಪೂಜೆಯಲ್ಲಿ ಕೃಷಿ ಫಲಗಳಿಗೆ ಸಲ್ಲುವ ಪ್ರಾಧಾನ್ಯವನ್ನು ನೋಡಿದರೆ, ಬಲೀಂದ್ರನು ಕೃಷಿ ಸ್ವಾಮಿಯೆನ್ನುವುದು ಸ್ಪಷ್ಟವಾಗುತ್ತದೆ. ಈ ಹಬ್ಬವನ್ನು ಕೆಲವರು ಹಾಲಹಬ್ಬವೆಂದೂ ಹೇಳುತ್ತಾರೆ.

### ೩. ಗದ್ದೆಗಂಡನ ಹಬ್ಬ :

ಮಘ ಮಳೆಯ ಆರಂಭದ ದಿನ, ಗದ್ದೆಗಂಡನ ಹಬ್ಬ ವಾಗುತ್ತದೆ. ಇದನ್ನು ಬೆಚ್ಚಿನ ಸಂಕ್ರಾಂತಿ, ಮಗ ಬೆಚ್ಚು ಹಬ್ಬ ವೆಂದೂ ಕರೆಯುವ ವಾಡಿಕೆ. ಅಂದು ಮುಂಜಾನೆ ಮಬ್ಬು ಗತ್ತಲೆಯಿರುವಾಗಲೇ ಮುಂಡಕಿಯ ಇಲ್ಲವೆ ಬೋಕುಳ ಟೊಂಗೆ ಯನ್ನು ತೆಗೆದುಕೊಂಡು ಹೋಗಿ, ಪ್ರತಿಗದ್ದೆಯ ಹಾಳೆಯ ಮೇಲೆ ನೆಟ್ಟು ಬರಬೇಕು. ಇದಕ್ಕೆ ಬೆಚ್ಚು ಕೊಡುವುದು ಎಂದೂ ಕರೆಯುತ್ತಾರೆ. ಈ ಬೆಚ್ಚು ಗದ್ದೆಯ ಗಂಡ'. ಗದ್ದೆಗೆ ಹೀಗೆ ಗಂಡನನ್ನು ಮಾಡದಿದ್ದಲ್ಲಿ ಬತ್ತದ ತೆನೆ ಸುಗಿಯದು ಎಂಬ ನಂಬಿಕೆಯಿದೆ.

### ೪. ಹೊಸತು – ಹೊಸಕ್ಕಿ ಹಬ್ಬ :

ಗದ್ದೆಗೆ ತೆನೆ ಸುಗಿದು ಹಾಲು ತುಂಬಿದಾಗ ಹೊಸತು ಇಲ್ಲವೆ ಕದಿರನ್ನು ಕೊಯ್ಯುವ ಹಬ್ಬವನ್ನು ಮಾಡುತ್ತಾರೆ. ಅಂದು ಬತ್ತದ ತೆನೆಯನ್ನು ಪೂಜಿಸಿ, ತೆನೆಯನ್ನು ಮನೆಯ ಬಾಗಿಲು ಕೊಟ್ಟಿಗೆಯ ಬಾಗಿಲು, ಹಾಗು ವ್ಯವಸಾಯ ಉಪ ಕರಣಗಳಿಗೆ ಕಟ್ಟುತ್ತಾರೆ. ಈ ಹಬ್ಬ ಕೆಲವರಲ್ಲಿ ಎರಡು ದಿನ

ಗಳವರೆಗೆ ನಡೆಯುತ್ತದೆ. ಮೊದಲನೆಯ ದಿನಕ್ಕೆ 'ಹೊಸತು' ಎಂದು ಕರೆದರೆ, ಮೂರನೆಯ ದಿನಕ್ಕೆ 'ಕಿರಿ ಹೊಸತು' ಎನ್ನುತ್ತಾರೆ. ಈ ಹಬ್ಬಕ್ಕೆ ನೆಂಟರಿಷ್ಟರನ್ನು ಕರೆಯುವ ವಾಡಿಕೆಯಿದೆ. ಹೊಸ ತಿನ ದಿನವೇ ಕೆಲವರು ಹೊಸಕ್ಕಿಯನ್ನು ಉಣ್ಣುವ ಶಾಸ್ತ್ರವನ್ನೂ ಮಾಡಿ ಮುಗಿಸುತ್ತಾರೆ.

**೫ ಸುಗ್ಗಿಯಹಬ್ಬ :**

ಈ ಹಬ್ಬವೂ ಸಸ್ಯಾರಾಧನೆಗೆ ಸಂಬಂಧಿಸಿದ ಹಬ್ಬವೆನ್ನು ವುದು ಅದರ ಆಚರಣೆಯ ವಿಧಾನಗಳನ್ನು ನೋಡಿದರೆ ವಿದಿತ ವಾಗುತ್ತದೆ. ಈ ಹಬ್ಬವನ್ನು ಕುರಿತು ಬೇರೆಡೆ ಚರ್ಚಿಸಲಾಗಿದೆ.

**ಆ. ಪ್ರಾಣಿದೇವತೆಗಳು :**

ಕಾಡಿನ ಕ್ರೂರ ಪ್ರಾಣಿಗಳ ಕಾಟಕ್ಕೆ ಅವುಗಳಲ್ಲಿ ಹುದುಗಿದ ಅದ್ಭುತ ಶಕ್ತಿಗೆ ಅಂಜಿ, ವಿಸ್ಮಯಪಟ್ಟು ಹಾಗು ತನ್ನ ಆಶ್ರಯ ದಲ್ಲಿಯೇ ಬೆಳೆದು ತನಗೆ ಉಪಕಾರಿಗಳಾದ ಅನೇಕ ಪ್ರಾಣಿಗಳ ವಿಷಯದಲ್ಲಿ ಆದರ ಭಾವನೆಯನ್ನು ತಳೆದು, ಈ ಜನಾಂಗಗಳು ಹಲವಾರು ಪ್ರಾಣಿಗಳನ್ನು ಪೂಜಿಸಿವೆ. ಇವರು ಪೂಜಿಸುವ ಪ್ರಾಣಿಗಳಲ್ಲಿ ಹುಲಿ, ನಾಗ, ಆಕಳು, ಎತ್ತು, ಕಪಿ ಇವು ಮುಖ್ಯ ವಾದವು. ಕೆಲವೆಡೆ ಹಾಲಕ್ಕಿ ಹಾಗು ಕರೆ ಒಕ್ಕಲು ಇಲಿ ಮತ್ತು ಗಂಪೆಗಳನ್ನೂ ಪೂಜಿಸುತ್ತಾರೆ. ಹುಲಿಹಬ್ಬ, ನಾಗರಹಬ್ಬ, ಕರಡಿ ಹಬ್ಬ, ಗಂಟಿ ಹಬ್ಬಗಳು ಪ್ರಾಣಿಗಳಿಗೆ ಸಂಬಂಧಿಸಿದ ಹಬ್ಬಗಳು.

**೧. ಗಂಟಿ ಹಬ್ಬ:**

ಒಕ್ಕಲು ಮಕ್ಕಳ ಗೋ ನಿಷ್ಠೆ ಅನ್ಯಾದೃಶವಾದುದು. ಗೋ ಹತ್ಯೆ ಮಾಡಿದವರು ಗೋ ಕಲ್ಲು ನೆಟ್ಟು, ವರ್ಷಕ್ಕೊಮ್ಮೆ ಅದರ ಪೂಜೆಯನ್ನು ಮಾಡುವ ರಿವಾಜು ಗೊಂಡ ಒಕ್ಕಲಲ್ಲಿದೆ. ಇವರು ತಮ್ಮ ಗೋ ನಿಷ್ಠೆಯನ್ನು ವ್ಯಕ್ತಪಡಿಸಲು ದೀಪಾವಳಿಯಲ್ಲಿ ಗೋವಿನ ಹಬ್ಬವನ್ನಾಚರಿಸುತ್ತಾರೆ. ಇದಕ್ಕೆ ಹಟ್ಟಿಯ ಹಬ್ಬ, ದನ ಬೆಚ್ಚುವುದು ಎಂದೂ ಕರೆಯುತ್ತಾರೆ. ಕೆಲವರು ಈ ಹಬ್ಬವನ್ನು ಕಾರ್ತಿಕ ಹುಣ್ಣಿಮೆಯಂದು ಮಾಡಿ, ಈ ಹಬ್ಬಕ್ಕೆ ಗಂಟಿ ಹುಣ್ಣಿಮೆಯೆಂದು ಕರೆಯುತ್ತಾರೆ. ಅಂದು ದನಕರುಗಳನ್ನು ಹೂಮಾಲೆ, ಆಭರಣಗಳಿಂದ ಸಿಂಗರಿಸಿ, ಪೂಜಿಸಿ, ಅವನ್ನು ಸ್ವೇಚ್ಛೆಯಿಂದ ಕುಣಿಯಲು ಬಿಡುತ್ತಾರೆ.

**೨. ನಾಗರ ಹಬ್ಬ, ಕರಡೀ ಹಬ್ಬ ಇತ್ಯಾದಿ:**

ನಾಗರ ಪಂಚಮಿಯಂದು ನಾಗರ ಹುತ್ತಿಗೆ ಹಾಲೆರೆದು ನಾಗರನ್ನು ಪೂಜಿಸುತ್ತಾರೆ. ಕರಡಿ ಹಬ್ಬವು ಸುಗ್ಗಿಯ ಹಬ್ಬ ಇಲ್ಲವೆ ಯುಗಾದಿ ಹಬ್ಬದ ಒಂದಂಗವಾಗಿ, ಹುಲಿ ಹಬ್ಬವು ಬಂಡಿ ಹಬ್ಬದ ಜೊತೆಯಲ್ಲಿ ಆಚರಣೆಗೊಳ್ಳುತ್ತದೆ. ಕೆಲವೆಡೆ ಪ್ರತ್ಯೇಕ ಹುಲಿ ಹಬ್ಬವಾಗುವುದೂ ಉಂಟು.

ಕುಲಚಿನ್ಹೆ ಉಪಾಸಕರಾದ ಒಕ್ಕಲಿಗ ಬುಡಕಟ್ಟಿನವರಿಂದ ಈ ಜಿಲ್ಲೆಯಾದ್ಯಂತ ವೃಕ್ಷ ಹಾಗು ಪ್ರಾಣಿ ದೇವತೆಗಳ ಉಪಾಸನಾ ಪದ್ಧತಿ ಹಾಗು ಅವುಗಳಿಗೆ ಸಂಬಂಧಿಸಿದ ಹಬ್ಬಗಳು ಪ್ರಚಲಿತವಾಗಿವೆ.

## ೩. ವೀರ ದೇವತೆಗಳು :

ಹೋರಾಟ, ಯುದ್ಧಗಳು ಕಡಿಮೆಯಾದ ಆಧುನಿಕ ಯುಗದಲ್ಲಿ ಬುಡಕಟ್ಟು ಜನಾಂಗದವರು ಪ್ರಶಾಂತ ಜೀವನವನ್ನು ಸಾಗಿಸುತ್ತಿದ್ದರೂ, ಒಂದು ಕಾಲಕ್ಕೆ ಇವರೂ ಸೈನಿಕ ಚಟುವಟಿಕೆಗಳಲ್ಲಿ ನಿರತರಾಗಿದ್ದರು ಎನ್ನುವುದು ಇವರ ಜಾನಪದ ಅಧ್ಯಯನದಿಂದ ಸಾಬೀತಾಗುತ್ತದೆ. ಇವರ ಅನೇಕ ಹಾಡುಗಳಲ್ಲಿ ವೀರರಿಗೆ ದಂಡಿನ ಕರೆಬಂದು, ಅವರು ದಂಡಿನೂಟವನ್ನುಂಡು, ಕುದುರೆಯೇರಿ, ಉಕ್ಕಿನ ಕೋಟು ಧರಿಸಿ, ಗಚ್ಚಿನ ಮುಂಡಾಸು ಧರಿಸಿ ಕತ್ತಿ ಕೋವಿಗಳನ್ನು ಹಿಡಿದು ದಂಡಿನ ಕಾಳಗಕ್ಕೆ ಸವನುತ್ತಾರೆ. ಕೆಲವು ಹಾಡುಗಳು ಯುದ್ಧದಲ್ಲಿ ಹೋರಾಡಿ ಸತ್ತ ವೀರರ ಹಾಗೂ ಅವರ ಜೊತೆಯಲ್ಲಿ ಸತಿಹೋದ ಸಾಧ್ವಿಯರ ಜೀವನ ವೃತ್ತಾಂತವನ್ನು ಹೇಳುತ್ತವೆ. ಇಂಥ ವೀರರ ಹೆಸರಿನಲ್ಲಿ ಮೂರ್ತಿಗಳನ್ನು ಕೆತ್ತಿಸಿ ಇಲ್ಲವೆ ಕಲ್ಲನ್ನು ನೆಟ್ಟು, ಪೂಜಿಸಿ ಭಕ್ತಿ ಗೌರವವನ್ನು ಸಲ್ಲಿಸುವ ಪರಿಪಾಠ ಕರಾವಳಿಯಲ್ಲಿದೆ. ಇಂತಹ ಅನೇಕ ಜಟ್ಟಿಗನ ಗುತ್ತು, ಬೀರರ ಗುತ್ತು, ಮಾಸ್ತಿ ಗುತ್ತುಗಳಿವೆ. ಜನಪ್ರಿಯವಾದ ಕೆಲವು ವೀರರ ಗುತ್ತುಗಳು ಕಟ್ಟಡವನ್ನು ಹೊಂದಿ, ನಿತ್ಯ ಪೂಜೆಯನ್ನು ಪಡೆಯುತ್ತವೆ. ಕೆಲವು ಕಟ್ಟಡಗಳಿಲ್ಲದೆ ವರ್ಷಕ್ಕೊಮ್ಮೆ ಆಗುವ ವಿಶೇಷ ಹಬ್ಬಗಳಲ್ಲಿ ಮಾತ್ರ ಪೂಜೆಗೊಳ್ಳುತ್ತವೆ. ಈ ದೇವತೆಗಳ ಹೆಸರಿನಲ್ಲಿ ಜಟ್ಟಿಗನ ಹಬ್ಬ, ಬಂಡೀಹಬ್ಬಗಳಾಗುತ್ತವೆ. ಈ ಸಂದರ್ಭದಲ್ಲಿ ಕಳಸಗಳ ಮೆರವಣಿಗೆಯಾಗುತ್ತದೆ. ಕಳಸಗಳು ವೀರರ ವೇಷಗಳಾಗಿವೆ. ಬಂಡಿಹಬ್ಬದ ವಿಶೇಷ ಆಕರ್ಷಣೆಯೆಂದರೆ, ದೇವರು

ಉಯ್ಯಾಲ ಚಪ್ಪರವನ್ನು ಏರುವುದು. ಕೆಲವೆಡೆ ಬಂಡಿ ಹಬ್ಬ ದಲ್ಲಿ ಸೆಡಿಯಾಡುವ ರೂಢಿ ಕ್ವಚಿತ್ತಾಗಿ ಇದೆ. ಬಂಡಿ ಹಬ್ಬದಲ್ಲಿ ಕೋಳಿ. ಕುರಿಗಳನ್ನು ವೀರ ದೇವತೆಗಳಿಗೆ ಬಲಿಕೊಡುವ ವಾಡಿಕೆ ಯಿದೆ.

**ಈ. ಪುರುಷ ದೇವತೆಗಳು :**

ತಿರುಪತಿ ವೆಂಕಟರಮಣನ ಹೆಸರಿನಲ್ಲಿ ಪ್ರತಿ ಮನೆಯ ಮುಂದೆ ತುಲಸಿಯನ್ನು ಪ್ರತಿಷ್ಠಾಪಿಸಿ ಅದಕ್ಕೆ ನಿತ್ಯ ಪೂಜೆ ಯನ್ನು ಮಾಡುತ್ತಾರೆ. ತಿರುಪತಿ ವೆಂಕಟರಮಣನ ಹೆಸರಿನಲ್ಲಿ ಹರಿದಿನವೆನ್ನುವ ವಿಶೇಷ ಉತ್ಸವವನ್ನು ತಿರುಪತಿ ಯಾತ್ರೆ ಮಾಡಿ ಬಂದವರು ಆಚರಿಸುತ್ತಾರೆ.

ಇವರು ನಂಬಿದ ಇನ್ನೊಂದು ದೇವತೆ ಹನುಮಂತ. ಹಿಂದಕ್ಕೆ ಹನುಮಂತ ದೇವರು ತಿರುಪತಿಗೆ ಯಾತ್ರೆ ಹೊರಡುವ ಪದ್ಧತಿಯಿತ್ತಂತೆ. ಆ ಕಾಲಕ್ಕೆ ಅನೇಕ ಭಕ್ತರು ದೇವರ ಜೊತೆ ಯಲ್ಲಿ ಕಾಲ್ನಡಿಗೆಯಿಂದ ತಿರುಪತಿಗೆ ಹೋಗುತ್ತಿದ್ದರಂತೆ. ಇಂದು ಹನುಮಂತ ದೇವರ ತಿರುಪತಿಯಾತ್ರೆ ನಿಂತು ಹೋಗಿದೆ.

ಶಿವನಿಷ್ಠೆಯನ್ನು ಇವರು ತೋರ್ಪಡಿಸಿದರೂ ಶಿವನನ್ನು ಸ್ವತಃ ಪೂಜಿಸುವುದಿಲ್ಲ. ಇವರ ಶಿವನಿಷ್ಠೆ ಅನಂತರಿನ ಕಾಲದಲ್ಲಿ ಬೆಳೆದು ಬಂದಿರಬೇಕು.

**ಉ. ಸ್ತ್ರೀ ದೇವತೆಗಳು :**

ಗ್ರಾಮವನ್ನು ರಕ್ಷಿಸುವ ಹಾಗು ನಂಬಿದವರ ಯೋಗ ಕ್ಷೇಮವನ್ನು ತಾಯಿಯಂತೆ ನೋಡಿಕೊಳ್ಳುವ ಗ್ರಾಮದೇವತೆ

ಅಮ್ಮ. ಅಮ್ಮನನ್ನು ದೇವತೆ, ಭೂಮಿತಾಯಿ, ಮರಿಕಾಳಮ್ಮ ಸಣ್ಣಮ್ಮ, ಬೆಳಿಯಮ್ಮ, ಎಂಬ ಬೇರೆ ಬೇರೆ ಹೆಸರುಗಳಿಂದ ಪೂಜಿಸುತ್ತಾರೆ. ಅಮ್ಮ ಕೆರಳಿದರೆ ಉಗ್ರ ಸ್ವರೂಪಿಯಾಗಿ ಕಾಡುವ ಮಹಾಮಾರಿಯೂ ಆಗುತ್ತಾಳೆ, ಎಂದು ನಂಬಿದ ಭಕ್ತರು, ಅಮ್ಮನ ಉಗ್ರಸ್ವರೂಪವಾದ ಮಾರಿಯನ್ನೂ ಪೂಜಿಸುತ್ತಾರೆ. ಈ ದೇವತೆಗಳ ಹೆಸರಿನಲ್ಲಿ ಬಂಡಿಹಬ್ಬ, ಮಾರಿ ಜಾತ್ರೆಗಳನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಸುತ್ತು ಮುತ್ತಲಿನ ವೀರದೇವತೆಗಳಿಗೆ ಕೋಳಿ, ಕುರಿಗಳ ಬಲಿಯಾಗುತ್ತದೆ.

ಸಾಮಾನ್ಯವಾಗಿ ಗ್ರಾಮದೇವತೆಗಳೆಂದು ಪರಿಗಣಿತವಾದ ಬೀರ, ಜಟ್ಟಿಗ, ಹುಲಿದೇವರು, ಮಾಸ್ತಿ, ಅಮ್ಮ ಮುಂತಾದ ದೇವತೆಗಳ ಪೂಜಾರಿಗಳು ಮೂಲತಃ ಕುಂಬಾರರು ಇಲ್ಲವೇ ಒಕ್ಕಲಿಗರು. ಈ ನಾಡಿಗೆ ಬ್ರಾಹ್ಮಣರು ಬರುವ ಪೂರ್ವದಲ್ಲಿ ಸ್ಥಳೀಕ ಗ್ರಾಮದೇವತೆಗಳ ಪೂಜಾರಿಗಳು ಹೆಚ್ಚಾಗಿ ಬುಡಕಟ್ಟು ಜನಾಂಗದವರೇ ಆಗಿದ್ದರು. ದೇವರ ಪೂಜಾದಿಗಳು ಆಗಮೋಕ್ತ ರೀತಿಯಲ್ಲಿರದೆ ಜಾನಪದೀಯವಾಗಿದ್ದವು. ದೇವತಾ ಸ್ತುತಿ ಗೀತಗಳು ಸ್ಥಳೀಯ ಭಾಷೆಯಲ್ಲಿಯೇ ಇದ್ದವು. ಬ್ರಾಹ್ಮಣರ ಆಗಮನವಾದ ಮೇಲೆ ಕ್ರಮೇಣ, ದೊಡ್ಡ ದೊಡ್ಡ ಗ್ರಾಮ ದೇವತೆಗಳ ಮಂದಿರಗಳ ಪೂಜಾರಿಗಳು ಬ್ರಾಹ್ಮಣರಾದರು. ದೇವತೆಗಳ ಪೂಜೆ ಪುನಸ್ಕಾರಾದಿಗಳಲ್ಲಿ ಆಗಮೋಕ್ತ ವಿಧಿ ವಿಧಾನಗಳ ಬಳಕೆಯಾದವು.

## ೨. ಆರಾಧನೆಗಾದಿ ಕಲೆ:

ಕಲೆಗಾಗಿ ಕಲೆಯೆನ್ನುವುದು ಜಾನಪದರ ಜಾಯಮಾನಕ್ಕೆ ಹಿಡಿಸದು. ಅವರು ಕಲೆಯನ್ನು ಕೇವಲ ರಂಜನೆಗಾಗಿ ಬಳಸದೆ, ದೇವತೆಗಳ ಪ್ರೀತ್ಯರ್ಥವಾಗಿ ಬಳಸಿದರು. ಕಲೆಯ ಪಾವಿತ್ರ್ಯ ವನ್ನು ಕಾಪಾಡಲಿಕ್ಕಾಗಿ ಇಂಥ ಕಲೆ, ಇಂಥ ನಿರ್ದಿಷ್ಟ ಉದ್ದೇಶ ಕ್ಕಾಗಿ ರೂಪಿತವಾದದ್ದು, ಅದನ್ನು ನಿಗದಿಪಡಿಸಿದ ದಿನದಂದೇ ಪ್ರದರ್ಶಿಸಬೇಕು, ಉಳಿದ ದಿನಗಳಲ್ಲಿ ಅದನ್ನು ಪ್ರದರ್ಶಿಸಬಾರದು. ಎಂಬ ನಿರ್ಬಂಧವನ್ನು ಹೇರಿ, ಕಲೆಗಳ ಪಾವಿತ್ರ್ಯವನ್ನು ಈ ಜನರು ಕಾಪಾಡಿಕೊಳ್ಳಬಯಸಿದರು. ಈ ಕಾರಣಕ್ಕಾಗಿಯೇ ಸುಗ್ಗಿಯ ಕುಣಿತ, ಮಂಡಲ ಕುಣಿತ, ಹೂವಿನ ಮಕ್ಕಳ ಕುಣಿತ, ತಾರ್ಲೆಕುಣಿತ ಪುಗಡಿ ಕುಣಿತ, ಹಗಣ, ಮುಂತಾದವುಗಳನ್ನು ನಿರ್ದಿಷ್ಟಪಡಿಸಿದ ದಿನ ಇಲ್ಲವೇ ನಿರ್ದಿಷ್ಟ ಉದ್ದೇಶಕ್ಕಾಗಿ ಬಳಸಿ ದರು. ಬಹುಶಃ ಗುಮಟೆಯ ಪದವೊಂದೇ ಇವರು ಬೇಕೆಂದಾಗ ಮಾಡಬಹುದಾದ ಮನೋರಂಜಕ ಕಲೆಯೆಂದು ತೋರುತ್ತದೆ.

### ಅ. ಸುಗ್ಗಿಯ ಕುಣಿತ:

ಗೊಂಡರಲ್ಲಿ ಸುಗ್ಗಿಯ ಕುಣಿತವು ಶಿವರಾತ್ರಿಯ ಸಮಯ ಕ್ಕಾಗುತ್ತದೆ. ಹಾಲಕ್ಕಿ ಒಕ್ಕಲಿಗರಲ್ಲಿ ಕೆಲವರು ಸುಗ್ಗಿಯ ಕುಣಿತವನ್ನು ಹೋಳಿಯ ಹಬ್ಬದ ಒಂದಂಗವಾಗಿ ಆಚರಿಸಿದರೆ, ಗೋಕರ್ಣ ಸೀಮೆಯವರು ಚೈತ್ರ ಶುದ್ಧ ಹುಣ್ಣಿಮೆಯ ಸಮಯಕ್ಕೆ ಈ ಕಲಾಪ್ರದರ್ಶನವನ್ನು ಮಾಡುತ್ತಾರೆ. ಸುಗ್ಗಿ

ಯನ್ನು ಕಟ್ಟುವ ವಿಧಾನ, ಕುಣಿತದ ರೀತಿ ಹಾಗು ತೊಡುವ ವೇಷ ಭೂಷಣಗಳು ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪ ಭಿನ್ನವಾಗಿವೆ. ಗೊಂಡರು ಸುಗ್ಗಿಯ ತುರಾಯಿ ಕಟ್ಟುವುದಿಲ್ಲ; ಹೂವಿನ ತಲೆದೊಡುಗೆ ತೊಡುತ್ತಾರೆ. ಕೋಲಾಡುವುದಿಲ್ಲ, ಕುಣಿಯುತ್ತಾರೆ. ಗುಮಟೆ ಮದ್ದಳೆಗಳನ್ನು ಬಾರಿಸುವುದಿಲ್ಲ; ದೆಕ್ಕೆ ಬಡಿಯುತ್ತಾರೆ. ತಾಳ ಎಲ್ಲರಿಗೂ ಸಾಮಾನ್ಯ. ಕೈಯಲ್ಲಿ ಕಾಮನ ಜಲ್ಲಿ ಹಿಡಿದ ಉದ್ದ ಮೂಗು. ಕೆನ್ನಾಲಿಗೆ ಹಾಗು ಸೊಂಡಲಿನ ಆಕಾರವಿರುವ ಮುಖವಾಡ ಧರಿಸಿದ ಕಾಮನ ವೇಷಗಳು ಗೊಂಡರ ಸುಗ್ಗಿಯಲ್ಲಿ ಬಂದರೆ. ಖಡ್ಗ ಹಿಡಿದ ಹನುಮಂತ ಇಲ್ಲವೆ ನಾರಿನ ಅಂಗಿ, ಮುಖವಾಡ ತೊಟ್ಟ ಕರಡಿ ವೇಷಗಳು. ಹಾಲಕ್ಕಿ ಒಕ್ಕಲಿಗರ ಸುಗ್ಗಿಯಲ್ಲಿ ಬರುತ್ತವೆ. ಹಾಲಕ್ಕಿ ಒಕ್ಕಲಿಗರ ಸುಗ್ಗಿಯ ಶ್ರೀಮಂತ ವೈಭವ ಇತರರ ಸುಗ್ಗಿ ಕುಣಿತದಲ್ಲಿಲ್ಲ. ಕರೆ ಒಕ್ಕಲು, ಗಾಮೊಕ್ಕಲಲ್ಲಿ ಸುಗ್ಗಿ ಕಟ್ಟುವ ರಿವಾಜು ಕಣ್ಮರೆಯಾಗಿವೆ. ಕರೆ ಒಕ್ಕಲು 'ಕರಿ ಸ್ನಾನ'ವನ್ನು ಮಾಡದೆ ಊಟವನ್ನು ಮಾಡಿ, ಅಪವಿತ್ರರಾದ ಪ್ರಯುಕ್ತ ಸುಗ್ಗಿ ಕಟ್ಟುವುದನ್ನು ಬಿಟ್ಟರಂತೆ. ಅವರು ಸುಗ್ಗಿಯನ್ನು ಕಟ್ಟದಿದ್ದರೂ ಬೇರೆ ಸಮಯದಲ್ಲಿ ಕೋಲಾಡುತ್ತಾರೆ.

ಸುಗ್ಗಿಯಲ್ಲಿ ಹಿರಿಸುಗ್ಗಿ ಮತ್ತು ಕಿರಿಸುಗ್ಗಿಗಳೆಂಬ ಎರಡು ಪ್ರಕಾರಗಳು. ಬೆಂಡು ಬೇಗಡೆಗಳ ವೈಭವೋಪೇತ ಹಾರ ತುರಾಯಿಗಳನ್ನು ತೊಟ್ಟು, ವಿವಿಧ ಸೋಗುಗಳನ್ನು ಹಾಕಿ, ಕೋಲು ಕುಂಚಗಳನ್ನು ಹಿಡಿದು, ಹೈಲಹಾಕಿ, ಸಮಸ್ತ ಪ್ರಕೃತಿಯೇ ಜಂಗಮ ರೂಪತಾಳಿ, ಕುಣಿದಂತೆ ಕುಣಿದು,

ಕೋಲಾಡಿದರೆ ಹಿರಿಸುಗ್ಗಿಯಾಗುತ್ತದೆ. ತಲೆಗೆ ಮುಂಡಾಸ ಕಟ್ಟಿ ಕೊಂಡು ಹೂದಂಡೆ ಇಳಿಬಿಟ್ಟು, ಗುಮಟೆ, ತಾಳದ ಗತ್ತಿಗನು ಗುಣವಾಗಿ ಕುಣಿದರೆ ಕಿರಿಸುಗ್ಗಿಯಾಗುವುದು. ಗೊಂಡರ ಸುಗ್ಗಿಯು ಕಿರಿಸುಗ್ಗಿಯನ್ನು ಹೋಲುತ್ತದೆ. ಸುಗ್ಗಿ ಕೋಲಾಟದ ಪದಗಳು ಹೇರಳವಾಗಿದ್ದು, ಅವು ವಸಂತೋತ್ಸಾಹವನ್ನು ಹೊಮ್ಮಿಸುತ್ತವೆ :

ಮೂಡಣ ಗುಡಿಮ್ಯಾನೇ ಮೂಡಿತೋ ಸೂಲ್ಯಮ್ಮ
ಓಡ್ಯಂದಿ ಕೋಲ್ಕೊಡೊ ಚಲ್ವ ಚಂದಿರಾಮಾ
ನವ್ಲಬಂತು ನವ್ಲು ನಮ್ಮ ಸ್ವಾಗೆ ಬಣ್ಣದ ನವ್ಲು
ನವ್ಲ ಬಂದ್ರೆ ಬರ್ಲಿ ನಮ್ಮ ಗುಜ್ರ ಬಣ್ಣದ ನವ್ಲು ॥

ಕಣಿಯುಲೇ ಕಾಮ್‌ನಂದನ । ನಂದನ ವನುಕೇ ರತಿರಂಬೆ ॥[೧]

ಇಂತಹ ದ್ವಿಪದಿಗಳ ಹೊರತಾಗಿ ಉದ್ದುದ್ದ ಪದಗಳನ್ನು ಹಾಡುವುದೂ ಉಂಟು.

ಹೋಳಿಯ ಹಬ್ಬದ ಒಂದಂಗವಾಗಿ ಬರುವ ಸುಗ್ಗಿ ಕೋಲಾಟವು ಫಾಲ್ಗುಣ ಶುದ್ಧ ನವಮಿ ಇಲ್ಲವೇ ದಶಮಿಯಂದು ಆರಂಭವಾಗಿ ಹೋಳಿ ಹುಣ್ಣಿಮೆಯ ಕಾಮದಹನದೊಂದಿಗೆ ಮುಗಿಯುತ್ತದೆ. ಗೊಂಡರಲ್ಲಿ ಕಾಮದಹನ ಕಾರ್ಯಕ್ರಮಕ್ಕೆ ಬದಲಾಗಿ, 'ಹಳಬು ಸುಡುವ' ಕಾರ್ಯಕ್ರಮ ಹೋಳಿ ಹುಣ್ಣಿಮೆಗೆ ಮೊದಲೇ ನಡೆಯುತ್ತದೆ.

---

೧ ಡಾ. ಎನ್. ಆರ್. ನಾಯಕ : ಸುಗ್ಗಿಯ ಪದಗಳು (೧೯೮೭) ಪು. ೯೮

ಸುಗ್ಗಿಯ ಸಂಪ್ರದಾಯಗಳನ್ನನುಲಕ್ಷಿಸಿದರೆ, ಇಲ್ಲಿ ವಸಂತೋತ್ಸವ, ಕಾಮದಹನ, ಹೋಲಿಕಾದಹನ, ಫಲಸಮೃದ್ಧಿ ವಿಧಿ, ಮುಂತಾದ ಹಲವು ಆಚರಣೆಗಳು ಸಂಕರಗೊಂಡದ್ದನ್ನು ಗುರುತಿಸಬಹುದು. ಮೂಲತಃ ಭಿನ್ನವಾಗಿದ್ದ ಈ ಆಚರಣೆಗಳು, ಕ್ರಮೇಣ ಸಮಾನ ಆಶಯಗಳ ಕಾರಣದಿಂದ ಒಂದಾಗಿ ಬೆರೆತಂತಿವೆ. ಎಲ್ಲ ಆಚರಣೆಗಳ ಮೂಲ ಆಶಯ ಒಂದೇ: ಪ್ರಕೃತಿಯನ್ನು ವಸಂತೋತ್ಸಾಹದಿಂದ ಅನುಕರಿಸುವುದು, ಕಾಡು ಕಾಮನೆಗಳನ್ನು ಹುಟ್ಟುಹಾಕುವುದು ಮತ್ತು ಸುಟ್ಟುಹಾಕುವುದು; ಚಿರಯೌವ್ವನ ಸಂಪದವನ್ನು ಪಡೆಯುವುದೇ ಆಗಿದೆ.[೨]

ಪ್ರಕೃತಿಯೊಡನೆ ನಿಕಟ ಸಂಬಂಧವನ್ನು ಹೊಂದಿದ ಈ ಪ್ರಾಕೃತರು ಅದರಲ್ಲಿ ತಾದಾತ್ಮ್ಯ ಹೊಂದಲು ತೋರಿದ ನಿಷ್ಠೆ ಗಮನಾರ್ಹ. ನಿಸರ್ಗದ ಚಲನವಲನಗಳನ್ನನುಸರಿಸಿ, ಅದರೊಡನೆ ಭಾವಸಮಾಧಿಯನ್ನು ಹೊಂದಿ ಸಂತೃಪ್ತಿ ಪಡೆಯಲು ಇವರು ಅನೇಕ ರೀತಿ ನೀತಿಗಳನ್ನು, ಮಾಯ, ಮಾಟ ತಂತ್ರಗಳನ್ನು ಅನುಸರಿಸಿದ್ದಾರೆ. ಅವುಗಳಲ್ಲಿ ಸಮಾನ ಪ್ರವರ್ತಕ ತಂತ್ರವೂ ಒಂದು. ಈ ತಂತ್ರದ ಪ್ರಕಾರ, ಏನಾಗಬೇಕೆಂದು ನಮಗಿಷ್ಟವಿದೆಯೋ, ತತ್‌ಸದೃಶ ಅನುಕರಣೆಯನ್ನು ಮಾಡುವುದು. ಹೀಗೆ ಅನುಸರಿಸಿದರೆ ನಮಗಿಷ್ಟ ಸಂಗತಿ ಜರುಗುವುದೆಂಬ ನಂಬಿಕೆ ಜಾನಪದರದು. ಪ್ರಕೃತಿಯು ಚಿಗಿತು, ಹೂಹಣ್ಣುಗಳಿಂದ ಸಮೃದ್ಧವಾಗಬೇಕಾದರೆ, ಹಾಗೆ ಸೋಗು ಹಾಕು

---

೨ ಡಾ. ಎನ್. ಆರ್. ನಾಯಕ: ಸುಗ್ಗಿಯ ಪದಗಳು (೧೯೬೭) ಪು. ೧೮

ವುದು. ಚಳಿಗಾಲದಲ್ಲಿ ಗಿಡಮರಗಳು ಎಲೆಗಳನ್ನುದುರಿಸಿ ಕೊಂಡು ಬೋಳಾಗಿರುವುದು ಸಹ್ಯವಲ್ಲ. ಪ್ರಕೃತಿ ಹೂಹಣ್ಣು ಗಳಿಂದ ತುಂಬಿದ್ದರೇನೇ ಚೆಂದ. ಆ ಚೆಂದವನ್ನೊದಗಿಸುವ ವಸಂತಾಗಮನದ ಹಾರೈಕೆ ನಮ್ಮೆಲ್ಲರ ವಾಂಛೆ. ಅದಕ್ಕಾಗಿ ಚಿಗುರು ಹೂ ಹಣು ಗಳನ್ನು ಹೋಲುವ ತುರಾಯಿ ತೊಟ್ಟು, ಕೋಲು ಹೀಲಿಕುಂಚ ಹಿಡಿದು, ಕರಡಿ, ಕಪಿ, ಹೀಗೆ ಹಲವು ವಿಧದ ಸೋಗು ಹಾಕಿ, ಬೆಂಡು ಬೇಗಡೆಗಳ ಮಿಂಚನ್ನು ಚಿಮ್ಮಿಸುತ್ತ, ಗುಮಟೆ ಮದ್ದಳೆಗಳ ಗುಡುಗನ್ನು ಹೊಮ್ಮಿಸುತ್ತ, ಹೊಯ್ಲು ಹಾಕಿ, ಕುಂಚವನ್ನು ಕುಣಿಸಿ ಕೋಲು ಹೊಡೆದು, ಪದಹಾಡಿ, ಕುಣಿಯುವ ಸುಗ್ಗಿಯ ಮೇಳವನ್ನು ನೋಡಿದರೆ ಸಮಸ್ತ ಪ್ರಕೃತಿಯೇ ಜಂಗಮರೂಪವನ್ನು ತಾಳಿ, ಮೈದುಂಬಿ ನರ್ತಿಸಿ ದಂತಾಗುತ್ತದೆ.[೩] ಪ್ರಪಂಚದಲ್ಲಿ ಹಲವೆಡೆ ಪ್ರಚಲಿತವಿರುವ, ಚಳಿರಾಯನನ್ನು ಸಾಗುಹಾಕಿ, ವಸಂತವನ್ನು ಎದುರುಗೊಳ್ಳುವ ಇಂಗಿತ ಸುಗ್ಗಿ ಕುಣಿತದಲ್ಲಿ ಅಡಕವಾಗಿದೆ.

### ಅ. ಮಂಡಲ ಪೂಜಾ ಕುಣಿತ:

ಮಂಡಲ ಕುಣಿತವು ಗೊಂಡರ ಕೋಗ್ರಿ ಜಾತ್ರೆಯ ಕಾಲಕ್ಕೆ ನಡೆಯುತ್ತದೆ. ಮಂಡಲವೆಂದರೆ ಅರಿಶಿನಪುಡಿ, ಕುಂಕುಮ, ಸೇಡಿ, ಅಕ್ಕಿಹಿಟ್ಟು ಮುಂತಾದವನ್ನು ಉಪಯೋಗಿಸಿ ಬರೆವ ಹಾವಿನ ಆಕಾರದ ಚಿತ್ರ. ಇದು ನಾಗದೇವತೆಯನ್ನು ನೆನಪಿಸುತ್ತದೆ. ಮಂಡಲದ ಮೇಲೆ ಕಳಸವನ್ನು ಪ್ರತಿಷ್ಠಾಪಿಸಿ,

---

೩ ಡಾ. ಎನ್.ಆರ್. ನಾಯಕ: ಸುಗ್ಗಿಯ ಪದಗಳು (೧೯೬೭) ಪು. ೨೦

ಪೂಜಿಸಿ, ಅದನ್ನು ಮುಖ್ಯ ಗೊಂಡನು ಹೊರುತ್ತಾನೆ. ಆಗ ಮಂಡಲದ ಪದವನ್ನು ದೆಕ್ಕಿಯ ಬಡಿತದ ಗತ್ತಿಗನುಗುಣವಾಗಿ ಹಾಡುತ್ತ ಕುಣಿಯುತ್ತಾರೆ.[೪] ಮಂಡಲ ಪದದಲ್ಲಿ ಬೇರೆ ಬೇರೆ ದೇವತೆ, ದೆವ್ವ, ಮಾಸ್ತಿ ಹಾಯ್ಗುಳಿ, ಹುಲಿದೇವತೆಗಳನ್ನು ನೆನೆದು ಮಂಡಲಕ್ಕೆ ಆವಾಹನೆ ಮಾಡಲಾಗುತ್ತದೆ :

ಸುತ್ತೊಳ ತಳಮನೆ ಕರದಾಡಿದೆ
ನೀನು ಸತ್ಯಕೆ ನಿನ್ ಕರದಾಡಿದೆ
ಕರ್ವ ಕರಕೆ ನೀನು ಬರುಲೇಬೇಕು
ಸತ್ಯವುಳ್ಳಯೆಂಬ ಜಟ್ಟಿಗರಾಯನೋ
ನಾಗಮ್ಮನ ಕರ್ದಿ ಕೂಡಿಕಂಡಿ
ಮತಿವುಳ್ಳವರು ಎಂಬ ನನದೀಕಂಡಿ
ಸತ್ತಿವುಳ್ಳಯೆಂಬ ಮಾಸ್ತಿಯಮ್ಮನ
ನಾನು ಕರ್ದ ಕರಕೆ ನೀನು ಬರುಲೆಬೇಕು
ವಾರಂತಕ್ಕು ನೀವು ಬಂದ ಮೇಲೆ
ನಿಮ್ಮ ಕಾವಲು ನಮಗೆ ಉಳಿಯಬೇಕು

ಮಂಡಲ ಪೂಜೆಯ ಹಾಡಿನಲ್ಲಿ ದೇವತೆಗಳಿಗೆ ಸಂಬಂಧಿಸಿರದ ಹಾಸ್ಯಯುಕ್ತ ಪದಗಳೂ ಸೇರಿವೆ. ಸೂಳೆಯ ಮನೆಗೆ ಹೋದ ಕಾಡ್ಯನೊಬ್ಬನು, ತಾನು ಮೆಚ್ಚಿದ ಸೂಳೆಯ ವರ್ಣನೆ ಮಾಡಿದ್ದು ಸ್ವಾರಸ್ಯವಾಗಿದೆ :

---

೪ ವಿವರಣೆ ನೀಡಿದ ಜಮೀರುಲ್ಲಾ ಶರೀಫ್ ಅವರಿಗೆ ಋಣಿ

ಸೂಳಿ ನೆಡಿಯೂ ಹೇಗದೆಯೆಂದಾ
'ಚವಳೀ ನೆಡಿನಾಂಗ್ ಆಗದೆ' ಎಂದಾ
ಸೂಳಿ ಮೂಗೂಽ ಹೆಂಗದಿಯೆಂದಾ
ಗೊಬ್ಬರ ಕೊಕ್ಯಾಂಗ್ ಅಽದೆ' ನಂದಾಽ
ಸೂಳಿ ಪಲ್ಲೂಽ ಹೆಂಗದಿಯೆಂದಾಽ
'ಹೋರೀ ಪಲ್ಲಾಂಗ್ ಅಽದೆ'ಯೆಂದಾ
ಸೂಳೀ ತೊಡಿಯೂ ಹೆಂಗದಿಯೆಂದಾ
ಗುಳಮಾಯ್ನ ಕಂಡಿಯಾಂಗ್ 'ಇರ್ವದು' ಯಂದಾ[೫]

ದಡಿಗ ಕಾಡ್ಯನು ತನಗೊಪ್ಪುವ ಬೇಕೆಂದಲ್ಲಿ ಚಿಗಳಿಯಂತೆ ಹತ್ತಿ ಇಳಿಯುವ ದಡೂತಿ ಕಾಯದ ಸೂಳೆಯನ್ನೇ ಆಯ್ಕೆ ಮಾಡಿಕೊಂಡಿದ್ದಾನೆ. ಮಂಡಲ ಕುಣಿತದ ಕಾಲಕ್ಕೆ ಹಗರಣ ವೇಷಗಳು ಬರುವ ಪರಿಪಾಠವಿದೆ. ಬಹುಶಃ ಹಗರಣ ವೇಷವೊಂದು, ನೆರೆದ ನೆರವಿಗೆ ಮನರಂಜನೆ ನೀಡುವ ಸಲುವಾಗಿ ಹೇಳಿದ ಪದ, ಇದಾಗಿರಬೇಕು.

ಕೋಗ್ರಿ ಜಾತ್ರೆಯ ಮಂಡಲ ಪೂಜಾಕುಣಿತ ಹಾಗು ಆದರ ಕೆಲವು ಕಾರ್ಯಕ್ರಮಗಳು, ಬಂಡಿಹಬ್ಬದ ಕೆಲವು ಚಡಂಗಗಳನ್ನು ಹೋಲುತ್ತವೆ. ಬಂಡಿಯ ಹಬ್ಬದ ದೇವರನ್ನು ಕರೆಯುವ ಕಾರ್ಯಕ್ರಮ ಸಾಮಿಮಕ್ಕಳು ಹಾಗು ಹೂವಿನ ಮಕ್ಕಳ ಕುಣಿತ, ಮುಖವಾಡಗಳ ಕುಣಿತ ಹಗರಣದ ವೇಷ ಮುಂತಾದವನ್ನು ನೆನೆಯಬೇಕು. ಹಲವಾರು ಆಶಯಗಳಲ್ಲಿ] ಸಮಾನತೆಯುಳ್ಳ ಈ ಕಾರ್ಯಕ್ರಮಗಳು ಒಂದೇ ಮೂಲದಿಂದ ಬಂದಂತಿವೆ.

---

೫ ಡಾ. ಎಲ್. ಆರ್. ಹೆಗಡೆ ಗೊಂಡರ ಪದಗಳು (೧೯೭೭). ಪು. ೧೮೨

**ಇ. ತಾರ್ಲೆ ಕುಣಿತ :**

ಗದ್ದೆ ಬಿತ್ತುವ ಕಾಲಕ್ಕೆ ಮಳೆಬರದಿದ್ದರೆ, ಕೃಷಿಕರು ಆತಂಕಗೊಳ್ಳುತ್ತಾರೆ. ಮಳೆಗಾಗಿ ಹಾರೈಸಿ, ಅವರು ತಮ್ಮ ಹೆಣ್ಣು ಮಕ್ಕಳನ್ನು ಬೈಲಲ್ಲಿ ಹಾಡಿಸಿ ಕುಣಿಸುತ್ತಾರೆ. ಹೆಣ್ಣು ದನಿಗೆ ವರುಣದೇವನ ಗಂಡೆದೆ ಕರಗಿ ಆತ ಮಳೆ ಸುರಿಸಬಹು ದೆಂದು ಅವರು ನಂಬಿರಬೇಕು, ಹೆಣ್ಣುಮಕ್ಕಳು ಸಮಸಂಖ್ಯೆಯಲ್ಲಿ ಬೈಲಲ್ಲಿ ಸೆರೆದು ಕೈ ಕೈ ಗೆಂಚಿ, ಹಿಂದಕ್ಕೆ ಮುಂದಕ್ಕೆ ಬಾಗಿ ಬಳುಕಿ, ಹಾಡು ಹೇಳುತ್ತ ಮಳೆ ಬರುವವರೆಗೂ ತಾರ್ಲೆ ಹಾಕಿ ಕುಣಿಯು ತ್ತಾರೆ:

ಹಯ್ಯು ಹರನೊಯ್ದು ಶೀತೆನ್ ತಿರುಗೊಯ್ದು
ಸ್ವಾತಿ ರಾಜೂನ ಕೊಂಡೊಯ್ದು । ತಾರ್ಲೆ
ಹೊಯ್ಲಿಲ್ಲ ಮಳೆಗಾಲ ಮಾಬ್ಲೊರ ಮನೆ ಮ್ಯಗೆ
ಹೊಯ್ಯೆಂದ್ರೆ ಹೊಯ್ಯೋ ಮಳೆಗಾಲ । ತಾರ್ಲೆ

ಹೀಗೆ ಕುಣಿತ ಹಾಡು ಮುಂದುವರಿಯುತ್ತದೆ.

**ಈ. ಬೆದ್ರಂಡೆ :**

ಮಳೆತರಿಸಲಿಕ್ಕಾಗಿ ಬೆದ್ರಂಡೆ ಇಲ್ಲವೆ ಬೆದ್ರುಂಡೆ ಎಂಬ ಹೆಸರಿನಲ್ಲಿ, ಸ್ವಲ್ಪ ಭಿನ್ನವಾಗಿ ಹೊನ್ನಾವರ ಕಡೆ ಹಾಡಿ, ಕುಣಿದು ಅಭಿನಯಿಸುವುದಿದೆ. ಫಲ ಸಮೃದ್ಧಿಗಾಗಿ ಬಿದಿರು ನೆಟ್ಟು, ಮಳೆಯನ್ನು ಆಹ್ವಾನಿಸುವ ಸಂಪ್ರದಾಯ ಹಿಂದಕ್ಕಿದ್ದಿರಬೇಕು. ಸಂಸ್ಕೃತ ಸಾಹಿತ್ಯದಲ್ಲಿ ವಂಶ (ಬಿದಿರು) ವಂಶವೃದ್ಧಿಯ ಸಂಕೇತ ವಾಗಿ ಬರುವುದಿದೆ.

ಈ ಹಾಡನ್ನು ಬೈಲಲ್ಲಿ ಹಾಡಿ ಕುಣಿಯುವಾಗ ಹೆಣ್ಣಿನ ಪರ ಹಾಗು ಗಂಡಿನ ಪರ ಹೀಗೆ ಎರಡು ಗುಂಪುಗಳಾಗಿ ಹಾಡುತ್ತಾರೆ:

ಚೊರ್-ಹೂಂಗೀಗೆ ಚೊರ್ ಮುಚ್ಚಲಿ
ಹೀರ್ ಹೂಂಗಿಗೆ ಹೀರ್ ಮುಚ್ಚಲಿ
ಗರ್ಗನ ಚೊಡಂಗಿ ಹೊನ್ ಬಾಸಿಂಗ
ಮುದ್ದೂ ಮಾಣಿಕದಾ ರವೆರತ್ನಾ

ಎಂದು ಮುಂತಾಗಿ ಫಲ ಸಮೃದ್ಧಿಗಾಗಿ ಹಾರೈಸಿ ಗಂಡನ್ನು ಪ್ರತಿನಿಧಿಸುವ ಪಂಗಡದವರು ಹೆಣ್ಣನ್ನು ಪ್ರತಿನಿಧಿಸುವ ಪಂಗಡದವರನ್ನು ಬೆನ್ನಟ್ಟುತ್ತಾರೆ. ಹೆಣ್ಣು ಗಂಡುಗಳ ಅಣುಕು ಕೂಡವನ್ನು ನಟಿಸುತ್ತಾರೆ. ಈ ಕೂಟದ ಆಟ ಮುಗಿದಮೇಲೆ, ಇಬ್ಬರಿಗೆ ಹೆಣ್ಣು ಹಾಗು ಗಂಡಿನ ವೇಷವನ್ನು ತೊಡಿಸಿ, ಅಣುಕು ಮದುವೆ ಮಾಡುತ್ತಾರೆ. ಹೀಗೆ ಹೆಣ್ಣು ಗಂಡುಗಳು ಜೋಡಿಯಾದಲ್ಲಿ, ಮಳೆಯಾಗುವುದೆಂಬ ನಂಬಿಕೆ ಅವರದು. ಗಂಡು ಹೆಣ್ಣುಗಳು ಹೊಲದಲ್ಲಿ ಭೋಗಿಸಿದರೆ ಮಳೆ ಬೆಳೆಯಾಗುವುದೆಂಬ, ಆದಿವಾಸಿಗಳ ನಂಬಿಕೆ ಸಾಂಕೇತಿಕವಾಗಿ ಇಲ್ಲಿ ಪ್ರಕಟವಾಗಿದೆ. ಗೀತ, ನೃತ್ಯ, ಸಂವಾದಗಳಿಂದ ಕೂಡಿದ ಈ ಕಲೆ, ಜಾನಪದಕ್ಕೊಂದು ಅಪೂರ್ವ ಕೊಡುಗೆ. ಪ್ರಕೃತಿ ಫಲಿಸಲಿಕ್ಕೆ ಹೆಣ್ಣು ಗಂಡುಗಳ ಕೂಟ ಆವಶ್ಯಕವೆಂದು ಬಗೆದ ಜಾನಪದರು, ಅದನ್ನು ನಟಿಸಿ ಪ್ರಕೃತಿ ಪುರುಷರನ್ನು ಕೆರಳಿಸಿ ಲೀಲಾಭಿಮುಖವಾಗುವಂತೆ ಮಾಡಿದ ಹಾಗಿದೆ.

## ಉ. ಹರಿದಿನ ಪೂಜಾ ಕುಣಿತ :

ಒಕ್ಕಲಿಗರಿಗೆ ಹರಿದಿನ ದೊಡ್ಡ ಉತ್ಸವ. ಅಂದು ತುಲಸಿಯನ್ನು ಸಿಂಗರಿಸಿ ಅದರ ಮಂಟಪದ ಸುತ್ತ ಕುಣಿಯುವ ಪರಿಪಾಠ ಗೊಂಡರಲ್ಲಿದೆ. ಈ ಕುಣಿತ ನಾಲ್ಕುದಿನಗಳವರೆಗೂ ಮುಂದುವರಿಯುವುದುಂಟು. ಹಾಲಕ್ಕಿ ಒಕ್ಕಲು ಮತ್ತು ಕರೆ ಒಕ್ಕಲು ಹರಿದಿನದಂದು ಗುಮಟೆಪದ ಮತ್ತು ಹಗಣ ಮಾಡುವುದಿದೆ.

## ಊ. ಹಗಣ (ಹಗರಣ) :

ಹಗಣ ಜಾನಪದರ ಬೀದಿ ನಾಟಕ. ಇದಕ್ಕೆ ಸಿದ್ಧವೇದಿಕೆ ಬೇಕೆಂದಿಲ್ಲ; ಹಂದರದ ಆವಶ್ಯಕತೆಯಿಲ್ಲ. ಬೈಲಲ್ಲಿ ರಸ್ತೆಯಲ್ಲಿ ಬೇಕಾದಲ್ಲಿ ಹಗಣವಾಡಬಹುದು. ವಿವಿಧ ಸೋಗುಗಳಿಂದ ನೆರೆದವರನ್ನು ಖುಷಿಪಡಿಸುವುದೇ ಹಗಣದ ಮೂಲ ಉದ್ದೇಶ. ಹಗಣದಲ್ಲಿ ಸಾಮಾಜಿಕ, ಐತಿಹಾಸಿಕ, ಪೌರಾಣಿಕ ವಸ್ತುವುಳ್ಳ ಹಲವಾರು ವೇಷಗಳು ಬರುತ್ತವೆ; ಪ್ರಾಣಿ ಪಕ್ಷಿಗಳ, ಬೇಟೆ ಆಟಗಳ ಅನುಕರಣೆಗಳನ್ನೂ ಮಾಡಲಾಗುತ್ತದೆ. ಮಂತ್ರಗಾರರ, ಮದ್ದುಗಾರರ ಅಣುಕುಗಳಿರುತ್ತವೆ; ಮರಕಾಲ ಕುಣಿತದ ಕಸರತ್ತಿರುತ್ತದೆ. ಹಲವಾರು ಧಾರ್ಮಿಕ ಉತ್ಸವಗಳಲ್ಲಿ ಹಗಣವನ್ನು ಮನೋರಂಜನೆಯ ಮುಖ್ಯ ಮಾಧ್ಯಮವನ್ನಾಗಿ ಬಳಸಲಾಗುವುದು. ಸುಗ್ಗಿಯ ಹಬ್ಬ, ಯುಗಾದಿಯ ಹಬ್ಬಗಳಲ್ಲಿ ಜರುಗುವ ಕರಡಿಹಬ್ಬವು ಹಗಣಕ್ಕಾಗಿಯೇ ಮೀಸಲಾಗಿದೆ. ಬಂಡಿ ಹಬ್ಬದ ಆಡುಕಟ್ಟೆಯಲ್ಲಿ, ಕೋಗ್ತಿ ಜಾತ್ರೆಯ ಮಂಡಲ ಕುಣಿತದಲ್ಲಿ ಗುಮಟೆಯ ಪದ ನಡೆಯುವಾಗ ಹಗಣವಾಡುವುದು ಸಾಮಾನ್ಯವಾಗಿದೆ. ಹಗಣ ಜಾನಪದಕ್ಕೆ ಬುಡಕಟ್ಟು ಜನಾಂಗ ಕೊಟ್ಟ ಬಹುದೊಡ್ಡ ಕೊಡುಗೆಯಾಗಿದೆ.

## ಎ. ಗುಮಟೆ ಪದ :

ಗೀತ, ವಾದನ, ಒಮ್ಮೊಮ್ಮೆ ನೃತ್ಯಾಭಿನಯಗಳಿಂದ ಕೂಡಿದ ಸಮ್ಮಿಶ್ರಕಲೆಯಿದು. ಹಾಲಕ್ಕಿ ಮತ್ತು ಕರೆ ಒಕ್ಕಲಲ್ಲಿ ಪ್ರಚಲಿತವಿದೆ. ಹಗಲಿಡಿ ದುಡಿದು ದಣಿದ ರೈತರು, ರಾತ್ರಿಯ ಬಿಡುವಿನ ವೇಳೆಯಲ್ಲಿ, ಕೊಪ್ಪದ ಜನರೆಲ್ಲ ತುಲಸಿಯ ಮುಂದೆ ಸೇರಿ, ಗುಮಟೆಯ ಪದ ಹಾಡುತ್ತಾರೆ. ತುಲಸಿಯ ಮದುವೆ, ಕಾರ್ತಿಕೋತ್ಸವ, ಹುಲಿದೇವರ ಹಬ್ಬ, ಹರಿದಿನಗಳಲ್ಲಿಯೂ ಈ ಕಲಾಪ್ರದರ್ಶನವಾಗುತ್ತದೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಗುಮಟೆಯ ಪದದ ಸ್ಪರ್ಧೆಯನ್ನೇರ್ಪಡಿಸಿ, ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನ, ಉಡುಗೊರೆಗಳನ್ನು ನೀಡಿ ಗೌರವಿಸುವ ಪದ್ಧತಿಯೂ ಇದೆ. ಗುಮಟೆಯ ಪದವನ್ನು ಹಾಡುವಾಗ, ಗುಮಟೆಯ ಗತ್ತಿಗನುಗುಣವಾಗಿ ಕುಣಿಯುವ 'ಕೂಚ'ನೊಬ್ಬನನ್ನು ಕೆಲವರು ಸೇರಿಸುತ್ತಾರೆ, ಗುಮಟೆಯ ಪದವನ್ನು ರಾತ್ರಿಯಿಡೀ ಹಾಡಿ ಕುಣಿಯುವಾಗ ಗುಮಟೆಯ ಪದದ ಏಕತಾನತೆಯನ್ನು ದೂರ ಮಾಡಲು, ಪದಗಳ ಮಧ್ಯದಲ್ಲಿ ಹಗಣ ವೇಷಗಳನ್ನು ತಂದು ರಂಗಕ್ಕೆ ಕಳೆ ತರುವುದೂ ಉಂಟು.

ಗುಮಟೆಯ ಪದಗಳು ಸ್ತುತಿಪರ ಪದಗಳಿಂದ ಆರಂಭವಾಗುತ್ತವೆ. ಅನಂತರ ರಾಮಾಯಣ, ಮಹಾಭಾರತ ಭಾಗವತಗಳಿಗೆ ಸಂಬಂಧಿಸಿದ, ಐತಿಹಾಸಿಕ ಘಟನೆಗಳುಳ್ಳ ಇಲ್ಲವೇ ತಮ್ಮ ಜನಾಂಗಗಳು ಬದುಕಿ ಬಾಳಿದ ರೀತಿ ನೀತಿಗಳು, ತೋರಿದ ಶೀಲ ಸಂಸ್ಕೃತಿಗಳು, ನಂಬಿದ ಜೀವನ ಮೌಲ್ಯಗಳು ಮುಂತಾದವನ್ನು ನಿರೂಪಿಸುವ ಪದಗಳನ್ನು ಹಾಡುತ್ತಾರೆ :

ಯಾರಿಗಿಂತ ಯಾರೇ ಹೆರಿಯುವಳು]]
ಯಾರಿಗಿಂತ ಯಾರೇ ಶಿರಿಯುವಳು
ಬೆಳ್ಳಿ ಕೋಲಿನಕಿಂತ ಬೆಳಿಯುವಳೋ
ಅದ ಶಿನ್ನದ ಕೋಲಿನಕಿಂತ ಶಿರಿಯುವಳೋ
ಯಾರಿಗಿಂತ ಯಾರೇ ಹೆರಿಯುವಳೋ
ಅಂಕೋಲಿಯು ಬೂಮಾತಾಯೆಲೋ[೬]

ಒಕ್ಕಲಿಗರಿಗೆಲ್ಲ ಬೆಳ್ಳಿಯ ಕೋಲಿನಕ್ಕಿಂತ ಬಿಳಿಯುವಳಾದ, ಚಿನ್ನದ ಕೋಲಿನಕ್ಕಿಂತ ಸಿರಿಕಳೆಯುಳ್ಳ ಅಂಕೋಲೆಯ ಭೂಮಿ ದೇವತೆ ಪೂಜ್ಯಳಾಗಿದ್ದಾಳೆ.

ಯಾರಿಗೆ ಯಾರಿಲ್ಲವೋ ದಾರಿಗೆ ಶಂಗಡಿಲ್ಲವೋ
ಬೆಟ್ಟ ಬೇಯುವಾದ ಜನರೇ ಬಲ್ಲರೇ
ಹೊಟ್ಟೆಯಲ್ಲಿ ಬೇವಾದು ಯಾರ್ ಅರಿಯಾರೋ
ಸೀಯಾ ತಿಂಬಾಗೇ ಎಲ್ಲರೂ ಅಯ್ದಾರೋ
ಕಂಯುಗ್ ತಿಂಬಾಗೇ ಯಾರೂ ಇಲ್ಲವೋ[೭]

ಇಂತಹ ತತ್ವಗರ್ಭಿತವಾದ ಪದಗಳೂ ಅಲ್ಲಲ್ಲಿ ಮಿಂಚಿ ಒಕ್ಕಲಿಗರ ಮಾಗಿದ ಅನುಭವಗಳನ್ನು ಪ್ರದರ್ಶಿಸುತ್ತವೆ.

---

೬ ಡಾ. ಎನ್.ಆರ್. ನಾಯಕ ಹೇಳುತೇವೋ ಗು.ಮ್ಮೆ ಪದನಾವಾ(೧೯೮೩) ಪು. ೬

೭ ಡಾ. ಎನ್. ಆರ್. ನಾಯಕ : ಹೇಳುತೇವೋ ಗುಮ್ಮೆ ಪದನಾವಾ (೧೯೮೩)ಪು. ೧೦೮

## ೪. ಹಲಿ (ರಂಗೋಲಿ) :

ಬುಡಕಟ್ಟು ಜನಾಂಗದವರು ಮನೆಯ ಗೋಡೆ ಹಾಗು ಅಂಗಳದಲ್ಲಿ ಬಿಡಿಸುವ 'ಹಲಿ ಆಕರ್ಷಕವಾಗಿರುತ್ತದೆ. ಮನೆ ಸಾರಿಸಿದ ಮೇಲೆ ಹಲಿ ತೆಗೆಯುವ ವಾಡಿಕೆ. ಮದುವೆ, ಹಬ್ಬ, ಹರಿದಿನಗಳಲ್ಲಿ ವಿಭಿನ್ನ ವಕ್ರವಿನ್ಯಾಸವುಳ್ಳ ಹಲಿಯನ್ನು ಬರೆಯುತ್ತಾರೆ. ಹಸಗರದಲ್ಲಿ ಬಿಡಿಸಿದ ಎಳ್ಳಿಯಮರ, ದೇವಸ್ಥಾನ, ತೆಂಗಿನಮರ, ಅಕ್ಕಿಮೊಡೆ, ತೆತ್ತಿಗಾರ್ತಿ, ಕಳಸ, ಕನ್ನಡಿ, ಬಾಸಿಂಗ, ಕೊಂಡ್ಲಿ, ಚೀರಣಿಗೆ, ಬಾಚಣಿಗೆ, ಕಾಯ್‌ಗೆಂಚ್ಗೆ ಮುಂತಾದ ಚಿತ್ತಾರಗಳು, ಅವುಗಳ ಸುತ್ತಲು ಕಟ್ಟಿದ ಗೆರೆಯ ನಕ್ಷೆಯ ಚೌಕಟ್ಟು, ಇವರ ಚಿತ್ರಕಲಾ ನೈಪುಣ್ಯಕ್ಕೆ ಹೆಗ್ಗುರುತಾಗುತ್ತವೆ. ಕೇವಲ ಬಿಳಿಸೇಡಿ ಹಾಗು ಕೆಂಪು ಜಾಜನ್ನು ಬಳಸಿ, ಕೋಳಿಗರಿಯಿಂದ ತೆಗೆದ ಈ ಚಿತ್ತಾರಗಳಲ್ಲಿ ಅವರು ಸಾಧಿಸಿದ ಕಲಾತ್ಮಕತೆಯನ್ನು ಮೆಚ್ಚಲೇಬೇಕು.

## ೫. ಕ್ರೀಡೆಗಳು :

ಇವರಲ್ಲಿ ಪ್ರಚಲಿತವಿರುವ ಕ್ರೀಡೆಗಳಲ್ಲಿ ಬೇಟೆ ಮತ್ತು ಕೋಳಿ ಅಂಕಗಳು ಮುಖ್ಯವಾದವು. ಅವರ ಬದುಕನ್ನು ಚಟುವಟಿಕೆಯುಳ್ಳದ್ದೂ, ಲವಲವಿಕೆಯುಳ್ಳದೂ ಆಗುವಂತೆ ಮಾಡುವ ಈ ಕೀಡೆಗಳು ಲಯಿಸಬಾರದು ಎನ್ನುವ ಹೇತುವಿನಿಂದ, ಈ ಕ್ರೀಡೆಗಳಿಗೆ ಧಾರ್ಮಿಕತೆಯ ಲೇಪವನ್ನು ಹಚ್ಚಿದರು. ಈ ಕ್ರೀಡೆಯನ್ನಾಡದವರು ದೈವೀಪ್ರಕೋಪಕ್ಕೆ ಗುರಿಯಾಗುವರು, ಎಂಬ ಭೀತಿಯನ್ನು ಹುಟ್ಟಿಸಿ, ಇವುಗಳ ಉಳಿವಿಗಾಗಿ ಹೆಣಗಿದರು.

## ಅ. ಬೇಟೆ:

ಮೃಗಯಾ ವಿಹಾರವು (ಬೇಟೆ) ಹಿಂದಕ್ಕೆ ರಾಜ ಮಹಾ ರಾಜರ ಪ್ರಮುಖ ಮನೋರಂಜಕ ಕ್ರೀಡೆಯಾಗಿತ್ತು. ಆದರೆ ತಮ್ಮ ಬದುಕಿನ ಬಹುಭಾಗವನ್ನು ಕಾಡಿನಲ್ಲಿಯೇ ಕಳೆಯುವ ಬುಡಕಟ್ಟು ಜನಾಂಗಗಳಿಗೆ ಬೇಟೆಯು ಒಂದು ಜೀವನಾವಶ್ಯಕ ವೃತ್ತಿಯೂ ಆಗಿತ್ತು. ತಮ್ಮ ಹಾಗು ತಮ್ಮ ಬೆಳೆಗಳ ರಕ್ಷಣೆ ಗಾಗಿ, ಮಾಂಸಾಹಾರಕ್ಕಾಗಿ ಇವರು ಬೇಟೆಯಾಡುತ್ತಿದ್ದರು ಕ್ರಮೇಣ ಕಾಡಿನ ಸಂಪರ್ಕ ದೂರವಾದ ಮೇಲೆ, ಮೃಗಬೇಟೆ ಯನ್ನು ಸರಕಾರ ನಿರ್ಬಂಧಿಸಿದ ಮೇಲೆ, ಇವರ ಬೇಟೆಯು ತೀಟೆ ಕಡಿಮೆಯಾಯಿತು. ಆದರೂ ವರ್ಷಕ್ಕೊಮ್ಮೆ ಬೇಟೆ ಯಾಡುವ ಪದ್ಧತಿಯನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ವಿಜಯ ದಶಮಿ ಇಲ್ಲವೆ ಸಂಕ್ರಾಂತಿಯಂದು ಹೊಲವಾಡಲು (ಬೇಟೆಯಾಡಲು) ಹೋಗುತ್ತಾರೆ. ಆಗ ಮನೆಗೊಬ್ಬರಾದರೂ ಬೇಟೆಯಾಡಲು ಹೋಗಲೇಬೇಕು. ಈ ಕಟ್ಟಳೆಯನ್ನು ಮುರಿದವರು ದಂಡ ತೆರಬೇಕಾಗುತ್ತದೆ. ಬೇಟೆ ಯನ್ನು ಸರಕಾರ ನಿಷೇಧಿಸಿದ್ದರೂ ಅಧಿಕಾರಿಗಳ ಕಣ್ಣು ತಪ್ಪಿಸಿ, ಇವರು ಬೇಟೆಯಾಡಿಯೇ ತೀರುತ್ತಾರೆ. ಇದಕ್ಕೆ ಮಾಂಸದಾಶೆ ಕಾರಣವೆನ್ನುವುದಕ್ಕಿಂತ 'ಬೇಟೆಯ ನಾಸ'ನ ಭೀತಿಯೇ ಮುಖ್ಯ ಕಾರಣ. ಬೇಟೆಗೆ ಹೋಗುವಾಗ ಬೇಟೆಯ ದೇವತೆಯನ್ನು ಪೂಜಿಸಿ, ಹರಕೆಯನ್ನು ಹೊತ್ತು, ಬೇಟೆಯ ನಾಯಿಗಳೊಡನೆ ಬೇಟೆಗೆ ಹೋಗುವ ವಾಡಿಕೆ. ಬೇಟೆಯಲ್ಲಿ ಬಲೆ ಬೇಟೆ, ಕಣ್ಣಿ ಬೇಟೆ, ಇಡಸಲ ಬೇಟೆ, ಮರಸಲ ಬೇಟೆ, ಕೋವಿ ಬೇಟೆ

ಮುಂತಾದ ಪ್ರಕಾರಗಳಿವೆ. ಇವುಗಳಲ್ಲಿ ಬಲೆ ಬೇಟೆಯೇ ಮುಖ್ಯವಾದದ್ದು.

ಬೇಟೆಯಾಡಿದ ಪ್ರಾಣಿಯ ಮಾಂಸದ ಹಂಚಿಕೆಯಲ್ಲಿ ಪ್ರಾಣಿ ಹೊಡೆದವನಿಗೆ ದೊಡ್ಡ ಪಾಲು, ಅನಂತರದ ಪಾಲು ಊರ ಮುಖಂಡರಿಗೆ ಸಲ್ಲುತ್ತದೆ. ಆ ಮೇಲೆ ಮನೆ ಮನೆಗಳಿಗೆಲ್ಲ ಸಮನಾಗಿ ಮಾಂಸವನ್ನು ಹಂಚಲಾಗುವುದು. ಬೇಟೆಗಳಿಗೆ ಸಂಬಂಧಿಸಿದ ಹಲವಾರು ಗೀತಗಳು ಐತಿಹ್ಯಗಳು ಪ್ರಚಲಿತ ಇವೆ.

**ಆ. ಕೋಳಿ ಅಂಕ :**

ಹಿಂದೆ ಕಾಳಗ ನಡೆದ ಕ್ಷೇತ್ರಗಳು ರಕ್ತ ಬಲಿ ಬೇಡುತ್ತವೆ ಯೆಂಬ ನಂಬಿಕೆಯಿದೆ, ಕಾಳಗವಾದಾಗ ರಕ್ತದ ರುಚಿಕಂಡ ಯುದ್ಧ ರಂಗಗಳು, ಇಂದು ಯುದ್ಧಗಳಿಲ್ಲದ್ದರಿಂದ ರಕ್ತದಾಹಕ್ಕೊಳಗಾಗಿವೆ. ಅವುಗಳ ರಕ್ತದಾಹ ಹಿಂಗದಿದ್ದರೆ ಅವು ಮಾನವನ ವಿತ್ತ ಜೀವಿತಗಳಿಗೆ ಹಾನಿಯನ್ನೊಡ್ಡುವವು ಎಂಬ ನಂಬಿಕೆಯಿಂದ ಜಾನಪದರು ಹಿಂದೆ ಕಾಳಗ ನಡೆದು ರಕ್ತಸಿಕ್ತವಾಗಿದ್ದ ಪ್ರದೇಶಗಳಲ್ಲಿ ಕೋಳಿ ಕಾಳಗವನ್ನಾಡಿಸಿ, ರಕ್ತತರ್ಪಣವನ್ನು ಮಾಡುತ್ತಾರೆ. ಇಂತಹ ಕೋಳಿ ಅಂಕದ ಬೈಲುಗಳು ಈ ಜಿಲ್ಲೆಯಲ್ಲಿ ಬೇಕಾದಷ್ಟಿವೆ. ನಿಗದಿ ಪಡಿಸಿದ ದಿನದಂದು ಒಕ್ಕಲಿಗರೆಲ್ಲ ನಿರ್ದಿಷ್ಟಗೊಳಿಸಿದ ಕೋಳಿ ಅಂಕದ ಬೈಲಲ್ಲಿ ನೆರೆಯುತ್ತಾರೆ. ಕೋಳಿ ಹುಂಜಗಳ ಕಾಲಿಗೆ ಹರಿತವಾದ ಕತ್ತಿಯನ್ನು ಕಟ್ಟಿ, ಎರಡು ಹುಂಜಗಳಲ್ಲಿ ಕಾಳಗವಾಡಿಸುತ್ತಾರೆ. ಈ ಸಂದರ್ಭದಲ್ಲಿ ಕೋಳಿಕಾಳಗ ನೋಡ ಬಂದವರು ಕೋಳಿಯನ್ನು ಅಂಕಕ್ಕೆ ಕಟ್ಟಿದವರು. ಕೋಳಿಗಳ

ಮೇಲೆ 'ಪಣ' ಕಟ್ಟುತ್ತಾರೆ. ಕೋಳಿ ಕಾಳಗದಲ್ಲಿ ಸತ್ತ ಕೋಳಿಯೂ ಗೆದ್ದ ಕೋಳಿಯ ಯಜಮಾನನ ವಶವಾಗುತ್ತದೆ. ಗೆದ್ದ ಕೋಳಿಯ ಮೇಲೆ 'ಪಣ' ಕಟ್ಟಿದವರು, ಸೋತವರಿಂದ ಪಣ ಪಡೆಯುತ್ತಾರೆ. ಒಮ್ಮೊಮ್ಮೆ ಸೋತವರು ಹಾಗು ಗೆದ್ದವರ ಮಧ್ಯೆ ಕಲಹವೇರ್ಪಟ್ಟು, ವಿತ್ತ ಜೀವಿತಗಳಿಗೆ ಹಾನಿಯಾದ ಘಟನೆಗಳನ್ನನುಲಕ್ಷಿಸಿ, ಕೋಳಿ ಅಂಕವನ್ನು ಸರಕಾರ ನಿಷೇಧಿಸಿದೆ, ಆದರೂ ಕದ್ದು ಕೋಳಿ ಅಂಕವನ್ನಾಡುವುದು ಇನ್ನೂ ನಿಂತಿಲ್ಲ.

ಹೀಗೆ ಬುಡಕಟ್ಟು ಜನಾಂಗದವರ ಕಲೆ ಕ್ರೀಡೆಗಳೆಲ್ಲ ಧಾರ್ಮಿಕತೆಯ ಚೌಕಟ್ಟಿನಲ್ಲಿಯೇ ರೂಪುಗೊಂಡಿವೆ.

೪

# ಸಾಹಿತ್ಯ

## ೧. ಸಾಹಿತ್ಯ:

ಬುಡಕಟ್ಟು ಜನಾಂಗಗಳಲ್ಲಿ ಜನಪದ ಸಾಹಿತ್ಯದ ಅಕ್ಷಯ ನಿಧಿಯಿದೆ. ಗೀತ, ಕತೆ, ಗಾದೆ, ಒಗಟು ಹೀಗೆ ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳು, ಸಂಗ್ರಹಿಸಿ ಮುಗಿಸಲಿಕ್ಕಾಗದಷ್ಟು ಇವರಲ್ಲಿ ಸಿಗುತ್ತವೆ. ಇವರ ಜನಪದ ಸಾಹಿತ್ಯ ಸಂಗ್ರಹಣೆಯು ಈ ಜಿಲ್ಲೆಯಲ್ಲಿ ವ್ಯಾಪಕವಾಗಿ ನಡೆದಿದೆ. ಆದರೂ ಸಂಗ್ರಹಿಸ ಬೇಕಾದ ಸಾಹಿತ್ಯ ಸಾಮಗ್ರಿ ಇನ್ನೂ ಬೇಕಾದಷ್ಟಿದೆ.

### ಅ. ಗೀತ :

ಹಾಲಕ್ಕಿ ಒಕ್ಕಲಿಗರ ಮಾತು ಕಾವ್ಯಮಯ. ಮುಗ್ಧರೂ, ಸಂವೇದನಾಶೀಲರೂ ಆದ ಇವರ ಮಾತು ಮಾತಿಗೆ ಗೀತ ಜೀಕಾಡುತ್ತದೆ. ಇವರ ನಡೆ, ನುಡಿ, ಕಾರ್ಯ ಕರ್ಮಗಳಲ್ಲೆಲ್ಲ ಹುದುಗಿದ್ದು ಪದ–ಪಾಡು. ಹಾಡೇ ಅವರ ಬದುಕಿನ ಒಡ ನಾಡಿ. ಅವರ ಬದುಕಿನ ನೋವು ನಲಿವಿನೊಡನೆ ಸ್ಪಂದಿಸಿ ಅವರ ನೋವನ್ನು ಮಾಣಿಸಿ, ನಲಿವನ್ನು ಹೆಚ್ಚಿಸುವ ಮಾಂತ್ರಿಕತೆ ಅವರು ಹಾಡುವ ಗೀತಗಳಲ್ಲಿದೆ. ಅವರು ಹಾಡುವ ಗೀತ ಗಳಲ್ಲಿ i ಹಾಡು ಮತ್ತು ii ಪದಗಳೆಂಬ ಮತ್ತೆರಡು ಪ್ರಭೇದ ಗಳಿವೆ. ಹೆಂಗಸರು ಹಾಡುವ ಗೀತಗಳು ಹಾಡುಗಳಾದರೆ, ಗಂಡಸರು ಹೇಳುವ ಗೀತಗಳು ಪದಗಳೆನಿಸಿಕೊಳ್ಳುತ್ತವೆ. ಹೆಂಗ

ಸರು ಹಾಡುವ ಹಾಡಿನ ಮಧುರಾಲಾಪಕ್ಕೆ, ಗಂಡಸರು ಹೇಳುವ ಪದಗಳ ಗತ್ತು ಗಮಕಗಳಿಗೆ ಮರುಳಾಗದವರು ವಿರಳ. ಇವರ ಗೀತಗಳು ಹೆಚ್ಚಾಗಿ ಜನಪ್ರಿಯ ಛಂದಸ್ಸಾದ ತ್ರಿಪದಿ ಹಾಗೂ ಏಳೆಗಳಲ್ಲಿವೆ. ಕತೆಯ ಹಾಡುಗಳಲ್ಲಿ ಏಳೆಯ ಸರಪಳಿ ಯನ್ನು ಹೆಣೆಯುತ್ತ ಹೋಗುವ ರೂಢಿ. ಏಳೆಯ ತುಣುಕು ಗಳು ಕೋಲಾಟ ಪದ್ಯದಲ್ಲಿರುತ್ತವೆ. ಕೆಲವು ಗೀತಗಳು ತಾನ ತಂದನ್ನ. ತಾನ, ಸುವ್ವಿ, ಸುವ್ವಲಾಲ. ಕೋಲು ಕೋಲೆನ್ನ ಕೋಲು. ಹೂವೇ ನಂದನವೇ ಲೋ ಲೋ ಲೋಲುಂಬೆ, ತುಂಬೆ ತುಂಬೆ, ಚಂದು ಮಾವಣ್ಣ ಜೀಜೀ ಹೀಗೆ ಯಾವುದೋ ಪಲ್ಲವಿಯನ್ನು ಹಾಡಿನ ಸೊಲ್ಲುಗಳಿಗಳವಡಿಸಿ ಹಾಡುತ್ತಾರೆ. ತ್ರಿಪದಿಗಳನ್ನು ಬಿಡಿ ಹಾಡುಗಳಲ್ಲಿ, ಮದುವೆ ಮುಂತಾದ ಶಾಸ್ತ್ರದ ಹಾಡುಗಳಲ್ಲಿ ಭಕ್ತಿಯ ಹಾಡುಗಳಲ್ಲಿ ಬಳಸುತ್ತರೆ. ಕಥನ ಕವನಗಳಲ್ಲಿ ಏಳೆಯ ಸರಪಳಿ ಹಾಗು ತಾನ ತಂದನ್ನಾದಿ ಪಲ್ಲವಿ ಗಳ ಬಳಕೆಯೇ ಹೆಚ್ಚಾಗಿರುತ್ತದೆ; ತ್ರಿಪದಿಯ ಬಳಕೆ ಅಲ್ಲಿ ಕಡಿಮೆ.

ಬದುಕಿನ ಹಲವು ಮುಖಗಳನ್ನು ಚಿತ್ರಿಸುವ ಭಾವ ಗೀತಾತ್ಮಕ ತ್ರಿಪದಿಗಳಲ್ಲಿ ತುಂಬಿರುವ ಸಾಹಿತ್ಯಕ ಸತ್ವ ಕಥನ ಗೀತಗಳಲ್ಲಿ ಕಡಿಮೆ. ಕೆಲವು ತ್ರಿಪದಿಗಳನ್ನು ಗಮನಿಸಬಹುದು:

ಲಾವಣ್ಯವತಿಯಾದ ಷೋಡಶಿಯೊಬ್ಬಳನ್ನು, ಕುಡಿ ಮೀಸೆಯೊಡೆಯುತ್ತಿರುವ ಯುವಕನೊಬ್ಬ ಪ್ರಶ್ನಿಸುತ್ತಾನೆ:

ಅಚ್ಚ ಮಾಯೀನಣ್ಣ ಮುಚ್ಚಿ ಮಾರುವ ಹೆಣ್ಣೆ
ದುಡ್ಡೀಗೆಟ್ಟಣ್ಣ ಕೊಡ್ತೀಯೆ ।

ಜನಪದ ಕವಿ 'ಅಚ್ಚ ಪೂಯೀನಣ್ಣು' ಎಂಬ ಪದದಲ್ಲಿ ಚೆಂದುಳ್ಳ ಚೆಲುವೆಯ ಮೀಸಲಳಿಯದ ಸೌಂದರ್ಯವನ್ನು ವರ್ಣಿಸಿದ ರೀತಿ ಹೃದ್ಯವಾಗಿದೆ. 'ದುಡ್ಡಿಗೆಷ್ಟು ಹಣ್ಣು ಕೊಡುವೆ?' ಎಂದು ಯುವಕ ಪ್ರಶ್ನಿಸುವಲ್ಲಿ ಯುವಕನ ಅಳಿಯಾಸೆಯ– ಸೋಗಲಾಡಿತನದ ಚಿತ್ರವನ್ನು ಕವಿ ಕೊಡುತ್ತಾನೆ. ಯುವಕನ ಅಳಿಯಾಸೆಯ ಸುಳಿವರಿತ, ಆ ಜಾಣ ಸುಂದರಿ ಉತ್ತರಿಸುವುದೂ ಅಷ್ಟೇ ಹೃದ್ಯವಾಗಿದೆ :

ಬೆಂಡು ಬಾಸಿಂಗವ ಕೊಂಡು ಮಾರು ಜಾಣ
ದುಡ್ಡೀಗೆಟ್ಟಣ್ಣ ಕೊಂಡ್ತಿಂಬೆ । ಎಲ್ಜಾಣ
ಕಂಡ ಕಂಡು ಸೈರಿಸೋ ಮನುದಲ್ಲಿ ॥

ಕಂಡ ಕಂಡವರನ್ನು ಕಾಮಿಸಿ, ಸೌಂದರ್ಯದ ಬೇಟೆ ಯಾಡುವ ಬೇಡವೃತ್ತಿ ಸರಿಯಾದದ್ದಲ್ಲ. ಸೌಂದರ್ಯವನ್ನು ಕಂಡು, ಗೌರವದಿಂದ ಮನದಲ್ಲೇ ಆಸ್ವಾದಿಸುವುದು ಕ್ಷೇಮಕರ ವಾದದ್ದು; ವಿವೇಕಯುಕ್ತವಾದದ್ದು– ಎಂದು ವಿನಯಪೂರ್ವಕ ವಾಗಿ, ಅಷ್ಟೇ ದಿಟ್ಟತನದಿಂದ ತಿಳಿಸುತ್ತಾಳೆ.

ಅಂಬಾರ್ದ ಮ್ಯೆನೆ ಕೊಂಬು ಹುಣಸೀ ಹಣ್ಣು
ಹೆಗ್ ಹೆಗ್ಗೀಗೊಂದು ಗಿಣಿಕೂತು । ಗಿಣಿರಾಜ
ಸಂಜೀಯಾಯಿತು ಮನ್ಗೋ ಪೊ ॥

ಎಂದು ನಿರ್ದೇಶಿಸಿದ ಹುಣಸಿಗೆ ಗಿಳಿರಾಮ,

ಸಂಜಾದರಾಗಲಿ ತಿಂಗಳ ಬೆಳಕುಂಟು
ಪಿರತ್ಯೊಳ್ಳರ ಹಣ್ಣು ಮೆಲಿಬೇಕು.

ಎಂದು ಉತ್ತರಿಸುವುದು ರೋಚಕವಾಗಿದೆ. ಹೆಣ್ಣನ್ನು ಕವಿ ಹುಣಸೆಗೆ ಹೋಲಿಸಿ, ಹೆಣ್ಣಿಗಾಗಿ ಬಾಯ್ಬಿಡುವ ವಿಟನನ್ನು ಗಿಳಿರಾಜನಿಗೆ ಹೋಲಿಸುತ್ತಾನೆ.

ಅತ್ತೆಯ ಮನೆಯಲ್ಲಿ ಬೇಕಷ್ಟು ಸುಖ ಸಂಪತ್ತಿದೆ. ಆದ ರೇನು ಅತ್ತೆಯ ಕಿರಿಕಿರಿಯಿಂದ ಸೊಸೆಯ ಪಾಲಿಗೆ ಸುಖವಿಲ್ಲ:

ಹಾಲಗುಂಬಳ ಕಾಯಿ ಯಾಲಕ್ಕಿ ಪರಿಮಳ
ಯಾವಾಗು ಇವ್ರಮಲ್ಲಿ ಕರುಕರಿ । ಮಾತಿಗು
ಕಲ್ಲೀನಂತ ಜೀವ ಕರಗೀತು ।

ಹಾಲಗುಂಬಳ ಕಾಯಿ, ಯಾಲಕ್ಕಿ ಪರಿಮಳ ಎಲ್ಲ ವಾಸ ನೆಗೆ ಮಾತ್ರ ಅಶನಕ್ಕಿಲ್ಲ. ಇಂಥವರ ಮನೆಯಲ್ಲಿ ಕೊಡುವ ಕಷ್ಟವನ್ನೆಲ್ಲ ವ್ಯಸನದಿಂದ ಸಹಿಸಿ, ಕೆಲಸ ಮಾಡಿದರೆ ಕಲ್ಲಿನಂತಹ ಜೀವವೂ ಕರಗುವುದು ಸಹಜ. ಇಂಥ ಸಂದರ್ಭದಲ್ಲಿ ಯಾರನ್ನು ಬಯ್ಯುವದು ?

ಅತ್ನೆಮ್ಗೊಳ್ಳೋರು ಮಾವ್ನೆಮ್ಗೊಳ್ಳೋರು
ಚಿಪ್ ನಮ್ಗೋಳ ಹೊಯ್ವದು । ದೈವರೆ
ಆಚೇರಿ ಕಯ್ಬಾಚಿ ಮುರಿಯಲಿ ॥

'ಅತ್ತೆ, ಮಾವ ಎಲ್ಲರೂ ಒಳ್ಳೆಯವರೇ, ಆದರೆ ಸೊಸೆಯ ಹೊಟ್ಟೆ ಹೊಡೆವದ್ದು, ಅವರು ಬಡಿಸುವ ಚಿಪ್ಪು (ಸವಟು). ಅದಕ್ಕಾಗಿ ಅಂಥ ಸಣ್ಣ ಸವಟನ್ನು ಮಾಡಿ, ಸೊಸೆಯನ್ನು ಕಾಡಿದ ಆಚಾರಿಯ ಕಯ್ಬಾಚಿಯು ಮುರಿದು ಹೋಗಲಿ' ಎಂದು ಸೊಸೆಯು ಶಪಿಸುವಲ್ಲಿ, ಹೆಣ್ಣಿನ ತೀವ್ರಯಾತನೆಯ ಚಿತ್ರ ಮಡುಗಟ್ಟಿ ನಿಂತಿದೆ. ಇಂತಹ ಸಾಹಿತ್ಯಕ ಸತ್ವವುಳ್ಳ ಅನೇಕ ತ್ರಿಪದಿಗಳನ್ನು ಉದಾಹರಿಸಬಹುದು.

**ಆ. ಕತೆಗಳು :**

ಗದ್ಯ ಹಾಗು ಪದ್ಯಗಳೆರಡರಲ್ಲಿಯೂ ಕತೆಗಳು ಹೇರಳವಾಗಿವೆ. ಜನಪದ ಗದ್ಯ ಕತೆಗಳನ್ನು ಅಜ್ಜಿ ಕತೆಗಳೆಂದು ಕರೆಯುವ ವಾಡಿಕೆ. ದುಡಿಯಲಾರದೆ ಮನೆಯಲ್ಲಿ ಕುಳಿತ ಅಜ್ಜಿಯರನ್ನು ಕತೆಗಾಗಿ ಕಾಡುವುದು ಮಕ್ಕಳ ಚಟ. ಅಜ್ಜಿಯರು ಕಾಡುವ ಮಕ್ಕಳ ಉಸ್ತುವಾರಿಯನ್ನು ನೋಡಿಕೊಂಡು, ಅವರ ಬೇಕು ಬೇಡಗಳನ್ನು ಪೂರೈಸಿ, ಕತೆ ಹೇಳಿ ಅವರ ಮನ ತಣಿಸುವಲ್ಲಿ ತಮ್ಮ ಬದುಕಿನ ಸಂಧ್ಯಾಕಾಲವನ್ನು ಕಳೆಯುತ್ತಾರೆ. ಇವರು ಗದ್ಯ ಕತೆಗಳ ಪ್ರಸಾರ ಕೇಂದ್ರಗಳು. ಇತರರೂ ಅಡಿಕೆಯನ್ನು ಸುಲಿಯುವಾಗ, ಸಸಿ ನಾಟಿ ಮಾಡುವಾಗ, ಕಳೆ ತೆಗೆಯುವಾಗ ಹಾಗೂ ಬಿಡುವಿನ ವೇಳೆಯಲ್ಲಿ ಕತೆಯನ್ನು ಹೇಳುತ್ತಾರೆ. ಉತ್ತರ ಕನ್ನಡದ ಜಾನಪದದಿಂದ ಬುಡಕಟ್ಟು ಜನಾಂಗದ ಕಥಾ ಸಾಹಿತ್ಯವನ್ನು ಕಳೆದರೆ ಉತ್ತರ ಕನ್ನಡದ ಜಾನಪದ ಬರಡಾಗುತ್ತದೆ. ಇವರ ಕತೆಗಳನ್ನು ೧. ಪ್ರಾಣಿ ಕತೆಗಳು ೨. ಕಿನ್ನರ ಕತೆಗಳು ೩. ಸಾಮಾಜಿಕ ಕತೆಗಳು ೪. ಐತಿಹಾಸಿಕ ಕತೆಗಳು ೫. ಪೌರಾಣಿಕ ಕತೆಗಳು ಎಂದು ಮುಂತಾಗಿ ವಿಂಗಡಿಸಿಕೊಂಡು ಅಭ್ಯಸಿಸಬಹುದು.

**೧. ಪ್ರಾಣಿ ಕತೆಗಳು :**

ಪ್ರಾಣಿ ಕತೆಗಳಲ್ಲಿ ಪ್ರಾಣಿಗಳೇ ಪ್ರಧಾನ ಪಾತ್ರ ವಹಿಸುತ್ತವೆ. ಅಲ್ಲಿ ಮನುಷ್ಯ ಪಾತ್ರಗಳು ಬಂದರೂ, ಅವು ಗೌಣ. ಪ್ರಾಣಿ ಕತೆಗಳಲ್ಲಿ ಮೇಲಿಂದ ಮೇಲೆ ಬರುವ ವ್ಯಕ್ತಿಯೆಂದರೆ

ಒಕ್ಕಲು ಗೌಡ; ಆತನ ಪೆದ್ದತನ, ಜಾಣತನಗಳೆರಡೂ ಈ ಕತೆ ಗಳಲ್ಲಿ ಪ್ರದರ್ಶಿತವಾಗುತ್ತವೆ. ಪ್ರಾಣಿ ಕತೆಗಳಲ್ಲಿ ಬರುವ ನರಿಯು ಜಾಣ ಜೊತೆಗೆ ಮಹಾ ಠಕ್ಕ ಮತ್ತು ತಂತ್ರಗಾರ. ಹುಲಿ ಹೆಡ್ಡ, ಅದನ್ನು ಇಲಿಯೂ ಮೋಸಗೊಳಿಸಬಹುದು. ಕುದುರೆ, ನಾಯಿ, ದನಗಳು ಸಭ್ಯ ಪ್ರಾಣಿಗಳು ಮತ್ತು ಮಾನವ ನಿಗೆ ಉಪಕಾರಿಗಳು. ಅವು ತಮ್ಮ ತಮ್ಮ ಒಡೆಯರನ್ನು ಗಂಡಾಂತರದಿಂದ ಪಾರು ಮಾಡಿದ ಉದಾಹರಣೆಗಳಿವೆ. ಹುಲಿ, ಬೆಕ್ಕು, ನಾಯಿಗಳು ಅಣ್ಣತಮ್ಮಂದಿರು. ಪ್ರಾಣಿ ಕತೆಗಳಲ್ಲಿ ಬರುವ ಪ್ರಾಣಿಗಳೆಲ್ಲ ಮನುಷ್ಯರಂತೆ ಮಾತಾಡಬಲ್ಲವು; ಅವನ ಜೊತೆಯಲ್ಲಿ ವ್ಯವಹರಿಸಬಲ್ಲವು. ಪ್ರಾಣಿ, ಕತೆಗಳಲ್ಲಿ ಹುಲಿ ಕಪ್ಲೆಯ ಕತೆ, ಸ್ವಾಮಿನಿಷ್ಠ ಬಸವಗಳ ಕತೆ, ಕಾಕಕ್ಕ ಗುಬ್ಬಕ್ಕನ ಕತೆ, ಇಣಚಿಯ ಕತೆ, ಹುಲಿಯ ಬಣ್ಣಕ್ಕೆ ನರಿ ಮೈಸುಟ್ಟುಕೊಂಡ ಕತೆ, ಹುಲಿಯ ಮಾಳಿಗೆಯನ್ನು ಸೇರಿದ ನರಿಯ ಕತೆ ಮುಂತಾ ದವು ಪ್ರಸಿದ್ಧವಾಗಿವೆ.

**೨. ಕಿನ್ನರ ಕತೆಗಳು :**

ಮಾಯ, ಮಂತ್ರ, ಮಾಟಗಳು, ಅದ್ಭುತರಮ್ಯ ಘಟನಾ ವಳಿಗಳು, ರಾಜಕುಮಾರರ ಸಾಹಸಗಳು, ರಾಕ್ಷಸರ ಕ್ರೂರ ಕರ್ಮಗಳು, ಸೆರೆಸಿಕ್ಕ ನಾಯಕ, ನಾಯಕಿಯರು ಪಡುವ ಕಷ್ಟ ಕಾರ್ಪಣ್ಯಗಳು ಮುಂತಾದವುಗಳಿಂದ ಕೂಡಿ, ಭಯ, ಬೆರಗು, ರೋಮಾಂಚನಗಳನ್ನು ಹುಟ್ಟಿಸುವ ಅದ್ಭುತರಮ್ಯ ಕತೆಗಳನ್ನು ಕಿನ್ನರ ಕತೆಗಳೆಂದು ಕರೆಯಬಹುದು. ಚಿನ್ನದ ಕೂದಲಿನ ಹೆಣ್ಣಿನ ಕತೆ (ಬಹುಶಃ ಪಾಶ್ಚಾತ್ಯ ದೇಶದ ಕೆಂಪು ಕೂದಲಿನ

ಹೆಣ್ಣು ಈ ಕತೆಗೆ ಮೂಲ ಪ್ರೇರಣೆ) ನಾಗರ ಕನ್ನೆ, ರಾಮ ಕೆಂದಾಳಿಯ ಹೂವು, ಈರಸೂರ ಹೆಣ್ಣುತಂದ ಕತೆಗಳನ್ನು ಈ ಮಾಲಿಕೆಯಲ್ಲಿ ಸೇರಿಸಬಹುದು.

**೩. ಸಾಮಾಜಿಕ ಕತೆಗಳು :**

ಸಾಮಾಜಿಕ ಅಂಶವುಳ್ಳ ಅನೇಕ ಕತೆಗಳಲ್ಲಿ ಮಲತಾಯಿಯ ಕ್ರೌರ್ಯ, ಅತ್ತೆಯ ಕಾಟ, ಸವತಿಯರ ಜಗಳ, ಬಂಜೆಯರ ಗೋಳು, ಶೀಲಭ್ರಷ್ಟ ಗಂಡ ಇಲ್ಲವೆ ಹೆಂಡತಿಯರ ಹೇಸಿಯಾದ ಬದುಕು, ಸಾಧ್ವಿಯರ ಮಾದರಿಯ ಜೀವನ, ಉದಾತ್ತರ ತ್ಯಾಗ ಬಲಿದಾನಗಳು ಈ ಕತೆಗಳಲ್ಲಿ ಪಡಿಮೂಡಿವೆ. ಎಲ್ಲಾಳೆ, ಮಾದಮ್ಮ, ಹೊನ್ನಮ್ಮ ಮುಂತಾದ ಕತೆಗಳನ್ನು ಇದಕ್ಕೆ ನಿದರ್ಶನವಾಗಿ ಕೊಡಬಹುದು.

**೪. ಐತಿಹ್ಯ ಕತೆಗಳು :**

ವೀರಗಲ್ಲು, ಜಟ್ಟಿಗನ ಕಲ್ಲು, ಮಾಸ್ತಿ ಕಲ್ಲುಗಳಿರದ ಗ್ರಾಮಗಳು ಉತ್ತರ ಕನ್ನಡ ಜಿಲ್ಲೆಯಲ್ಲಿ ದೊರೆಯಲಾರವು. ಈ ಕಲ್ಲುಗಳ ಸುತ್ತುಮುತ್ತ ಒಂದೊಂದು ಐತಿಹ್ಯ ಸುತ್ತಿಕೊಂಡಿದೆ, ಹೊನ್ನ ಮಾಸ್ತಿ, ಬಟ್ಟೆಬೀರ, ಕುಂಟ ಜಟ್ಗ ಮುಂತಾದ ವೀರ ದೇವತೆಗಳ ಐತಿಹ್ಯವನ್ನು ಇಲ್ಲಿ ನೆನೆಯಬಹುದು. ಸೋಂದೆಯ ಶೂರ ಕುಮಾರ ರಾಮ, ಚೆನ್ನಮ್ಮಾಜಿ ಬೈರಮ್ಮಾಜಿ, ಮುಂತಾದ ವ್ಯಕ್ತಿಗಳ ಕುರಿತು ಐತಿಹ್ಯಗಳಿವೆ. ಈ ಕತೆಗಳಲ್ಲಿ ತೆಳುವಾದ ಐತಿಹಾಸಿಕ ಘಟನೆಗಳ ಜೊತೆಗೆ ಇನ್ನಿತರ ಅಂಶಗಳೂ ಬೆರೆತು. ನಿಜವಾದ ಇತಿಹಾಸ ಕಣ್ಮರೆಯಾದದ್ದೇ ಹೆಚ್ಚು. ಸೃಷ್ಟಿಯ

ಹುಟ್ಟಿಗೆ ಸಂಬಂಧಿಸಿದ ಐತಿಹ್ಯಗಳು ಕಡಿಮೆ. ಹಾಲಕ್ಕಿ ಒಕ್ಕಲಲ್ಲಿ ದೊರೆಯುವ ಮಾದೇವರಾಯನ ಕತೆಯೊಂದೇ ಸದ್ಯ ದೊರೆತ ಸೃಷ್ಟಿಯ ಹುಟ್ಟಿಗೆ ಸಂಬಂಧಿಸಿದ ಕತೆಯೆನ್ನಬಹುದು.

**೩. ಪೌರಾಣಿಕ ಕತೆಗಳು :**

ಪುರಾಣಕ್ಕೆ ಸಂಬಂಧಿಸಿದ ಕತೆಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತಗಳಿಗೆ ಸಂಬಂಧಿಸಿದ ಕತೆಗಳು ನೂರಾರಿವೆ. ಅವುಗಳಲ್ಲಿ ಮಹಾಭಾರತಕ್ಕೆ ಸೇರಿದ ಕತೆಗಳದ್ದು ಸಿಂಹಪಾಲು. ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಕತೆಗಳು ವಾಲ್ಮೀಕಿ, ವ್ಯಾಸರ ಕತೆಗಳಿಂದ ತೀರ ಭಿನ್ನವಾಗಿವೆ. ಜಾನಪದ ಮನೋಧರ್ಮಕ್ಕೆ ತಕ್ಕ ರೀತಿಯಲ್ಲಿ ಬದಲಾವಣೆಗೊಂಡ ಈ ಕತೆಗಳು ಖಂಡಕಾವ್ಯದ ವ್ಯಾಪ್ತಿಯನ್ನು ಪಡೆದಿವೆ. ಹೀಗೆ ಖಂಡ ಕಾವ್ಯದ ವ್ಯಾಪ್ತಿಯನ್ನು ಪಡೆದ ಅನೇಕ ಕಥನ ಕವನಗಳಲ್ಲಿ, ಶಿಷ್ಟ ಕಾವ್ಯಗಳಲ್ಲಿ ಬರುವಂತೆ, ಕಾವ್ಯಾರಂಭದಲ್ಲಿ ದೇವತಾ ಸ್ತುತಿ, ಅಂತ್ಯದಲ್ಲಿ ಕಾವ್ಯ ಫಲಗಳ ಪ್ರಸ್ತಾಪವಿದೆ. ಶಿಷ್ಟರ ಪ್ರಭಾವಕ್ಕೊಳಗಾದ ಗಾಮೊಕ್ಕಲ ಮಹಾಭಾರತದಲ್ಲಿ ಈ ಕ್ರಮ ಹೆಚ್ಚಾಗಿದೆ;

ಮೂಲ ಮಹಾಭಾರತದಿಂದ ಆಕರ್ಷಕವಾದ ಮಾರ್ಪಾಡು ಪಡೆದ ಜಾನಪದ ಮಹಾಭಾರತದ ಒಂದೆರಡು ಅಂಶಗಳನ್ನು ಗಮನಿಸಬಹುದು :

(ಅ) ವ್ಯಾಸಭಾರತದಲ್ಲಿ ದ್ರೌಪದಿಯ ವಸ್ತ್ರಾಪಹರಣವು ಆವಳ ವೀರ ಪತಿಗಳು ಹಾಗು ಭೀಷ್ಮ ದ್ರೋಣರಂತಹ ಧಾರ್ಮಿ-

ಕರ ಎದುರಿಗೆ, ರಾಜ ಸಭೆಯಲ್ಲಿಯೇ ನಡೆದು ಹೋಗುತ್ತದೆ. ಇಂಥ ಸಂಸ್ಕಾರ ವಿಹೀನವಾದ ಘಟನೆಯು ಸುಮನಸ್ಕರಾದ ಜಾನಪದರಿಗೆ ಹಿಡಿಸಲಿಲ್ಲವೆಂದು ತೋರುತ್ತದೆ. ಆದಕ್ಕಾಗಿ ಅವರು ಆ ಸನ್ನಿವೇಶವನ್ನೇ ಮಾರ್ಪಡಿಸಿದ್ದಾರೆ: ಕುರುರಾಯ, ಧರ್ಮನನ್ನು ಹಾಗು ಅವನ ತಮ್ಮಂದಿರನ್ನು ಪಗಡೆಯಲ್ಲಿ ಸೋಲಿಸಿ, ದ್ರೌಪದಿಯನ್ನು ಪಗಡೆಯಾಟಕ್ಕೆ ಕರೆಸುತ್ತಾನೆ. ರಜಸ್ವಲೆಯಾದ ದ್ರೌಪದಿಯು ಪಗಡೆಯಾಡಲು ನಿರಾಕರಿಸು ತ್ತಾಳೆ. ಕುರುರಾಯ ಅವಳನ್ನು ಕರೆಯಲು ಆಗ್ರಹಪೂರ್ವಕ ವಾಗಿ ಕರ್ಣನನ್ನು ಕಳಿಸುತ್ತಾನೆ. ಸ್ತ್ರೀ ಭೀರುವಾದ ಕರ್ಣ ಮನಸ್ಸಿಲ್ಲದ ಮನಸ್ಸಿನಿಂದ ದ್ರೌಪದಿಯನ್ನು ಕರೆಯಲು ಹೋಗು ತ್ತಾನೆ. ದ್ರೌಪದಿ ಆಗಲೂ ಪಗಡೆಯಾಟಕ್ಕೆ ಬರಲು ಒಪ್ಪುವು ದಿಲ್ಲ. ಆಗ ಕರ್ಣನು ದ್ರೌಪದಿಗೆ ಮುಂದೆ ಅವಳನ್ನು ಕರೆಯ ಬರಲಿರುವ ದುಶ್ಯಾಸನನ ವಿಚಾರವಾಗಿ ತಿಳಿಸಿ, ಅವನಿಂದೊದಗ ಬಹುದಾದ ಅನಾಹುತವನ್ನು ಸೂಚಿಸಿ, ಅದರಿಂದ ಪಾರಾಗುವ ಮಾರ್ಗವನ್ನು ಹೇಳಿ ಹಿಂದಿರುಗುತ್ತಾನೆ. ದ್ರೌಪದಿ ಬರಲು ನಿರಾಕರಿಸಿದ ವಿಚಾರವನ್ನು ಕುರುರಾಯನಿಗರುಹುತ್ತಾನೆ. ಕುರುರಾಯ ದುಶ್ಯಾಸನನ್ನು ಕಳಿಸುತ್ತಾನೆ. ಅವನಿಗೆ ದ್ರೌಪದಿ ಯನ್ನು ಕರೆಯುವುದು ಸಂತೋಷದ ಕಾರ್ಯ. ಆತ ದ್ರೌಪದಿ ಯನ್ನು ಪಗಡೆಯಾಟಕ್ಕೆ ಕರೆದಾಗ, ಅವಳು ಅವನೊಡನೆ ಬರ ಲೊಪ್ಪಲಿಲ್ಲ. ಆಗ ಅವನು ಅವಳ ಮಣಿಮಾಡವನ್ನು ಮುರಿದು, ಒಳಪ್ರವೇಶಿಸಿ, ಅವಳ ಸೆರಗೆಳೆಯುತ್ತಾನೆ. ದ್ರೌಪದಿ ನಾರಾಯಣ ದೇವನನ್ನು ನೆನೆದಾಗ, ಅವಳ 'ಮೈದಲಿಗಿ' ಸ್ಥಿರ

ವಾಗುತ್ತದೆ. ದುಶ್ಯಾಸನ ಸಿಟ್ಟಿನಿಂದ ಅವಳ ರಟ್ಟೆಗೆ ಕೈಹಾಕಿ ಬೀದಿಗೆಳೆದು, "ಬಿಚ್ಚಿದ ಸೀರೆಯನ್ನು ಉಟ್ಟುಕೋ, ಕಂಡವರಿಗೆ ಅಪಶಕುನವಾಗುವುದು" ಎನ್ನುತ್ತಾನೆ. ದುಶ್ಯಾಸನನ ವ್ಯಂಗ್ಯ ನುಡಿಯಿಂದ ದ್ರೌಪದಿ ನಖಶಿಖಾಂತ ಕೆರಳಿ ಗರ್ಜಿಸುತ್ತಾಳೆ:

> ಕಳ್ಳ ದುಸುವಯ್ನು ಬೀಮೆದ್ದಿ ಮುರಿಯಾಲಿ
> ರಕ್ತದ ಕೋಡಿ ಹರಿಯಾಲಿ । ತಾನಿನ್ನು
> ಅದ್ದಸ್ ಸೆಮುರ್ಡಿಯಾ ಸೆಳ್ದಿ ಕಟ್ವೆ ॥

ಎಂದು ಮಹಾಭಾರತದಲ್ಲಿಯ ಭೀಮ ಪ್ರತಿಜ್ಞೆಯನ್ನು ದ್ರೌಪದಿಯೇ ಮಾಡುತ್ತಾಳೆ. ಹೀಗೆ ಜಾನಪದ ಕವಿ ಮಹಾಭಾರತದ ಕತೆಗೆ ಅದ್ಭುತ ತಿರುವು ನೀಡಿದ್ದಾನೆ. ಈ ಮಾರ್ಪಾಡಿನಿಂದಾಗಿ ಪಾಂಡವರ ಗಂಡಸುತನಕ್ಕೆ ಸವಾಲೆಸೆದ, ಭೀಷ್ಮ ದ್ರೋಣಾದಿಗಳ ನೈತಿಕ ಶಿಲ್ಪ ಶಿಖರವನ್ನೇ ಹಾಳಿಗೈದ ಸನ್ನಿವೇಶವೊಂದು ಕಣ್ಮರೆಯಾಗಿದೆ.

ಆಮೇಲೆ ದ್ರೌಪದಿ ಕುರುರಾಯನ ಜೊತೆಗೆ ಪಗಡೆ ಯಾಡಲು ಬಂದು, ಕುರುರಾಯನ ಕಪಟ ಪಗಡೆಯ ಮಣೆಯನ್ನು ತುಂಡು ತುಂಡು ಮಾಡಿ ನಾರಾಯಣ ದೇವನಿಂದ ಹೊಸ ಪಗಡೆಯ ಮಣೆಯನ್ನು ತರಿಸಿ, ಕುರುರಾಯನ ಜೊತೆಯಲ್ಲಿ ಪಗಡೆಯಾಡಲು ಕೂಡುತ್ತಾಳೆ. ಆಗ ಗಾಳಿ ಬೀಸಿ, ಅವಳೆದೆಯ ಮೇಲಿನ ಸೆರಗು ಜಾರುತ್ತದೆ. ಆಗ ಅವಳ ಬಾಹು ಮೂಲದೆಡೆಗೆ ಕುರುರಾಯನ ಗಮನ ಹರಿಯುತ್ತದೆ. ಅವಳ ತುಂಬಿದ ಕುಚಗಳ ಸೌಂದರ್ಯಪಾನ ಮತ್ತನಾದ ಕುರು

ರಾಯ ಪಗಡೆಯಲ್ಲಿ ಸೋಲುತ್ತಾನೆ, ಇಂತಹ ಸನ್ನಿವೇಶ ಮಹಾ ಭಾರತದಲ್ಲಿಲ್ಲ.

೬. ಮಹಾಭಾರತದಲ್ಲಿ ಅಭಿಮನ್ಯುವನ್ನು ಕೌರವರು ಚಕ್ರವ್ಯೂಹದಲ್ಲಿ ಬಂಧಿಸಿ ಕರ್ಣನಿಂದ ಕೊಲ್ಲಿಸುತ್ತಾರೆ. ಆದರೆ ಜಾನಪದ ಮಹಾಭಾರತದಲ್ಲಿ ಅಭಿಮನ್ಯುವಿನ ಕೊಲೆಗೆ ಒಳ ಸಂಚು ನಡೆಸಿ, ಕರ್ಣನಿಂದ ಅವನನ್ನು ಕೊಲ್ಲಿಸಿದವ ಅಭಿಮನ್ಯು ವಿನ ಮಾವ ನಾರಾಯಣದೇವ (ಕೃಷ್ಣ). ಅಭಿಮನ್ಯುವು ಕರ್ಣ ನಿಂದ ಗಾಯಗೊಂಡು ಬಿದ್ದಾಗ, ಸುಗುಣ ಗಂಭೀರನಾದ ಕರ್ಣನು ಅನುಕಂಪ ವ್ಯಕ್ತಪಡಿಸುತ್ತಾನೆ:

ಕಳ್ಳ ನಾರ್ಣದ್ಯೆವ ಸುಳ್ಳೊಂದ ಬರ್ದೀದ
ಮೋಸಾದಲ್ ನಾನು ಹೊಡದೀದೆ । ಮಗನೆ ಕೇಳು
ಆರ್‌ಗೆಯ್ತ್ರು ನೀನು ಬದಕೂವೆ ॥

ಆದರೆ ಈ ಅನುಕಂಪ, ಹುಟ್ಟಾ ವೀರನಾದ ಅಭಿಮನ್ಯು ವಿಗೆ ಬೇಕಾಗಿರಲಿಲ್ಲ. ಸೋತು ಬಾಳುವ ಬದುಕು ಅವನದ್ದಲ್ಲ. ಆದ್ದರಿಂದ ಅವನು ಬದುಕುವ ಅವಕಾಶವಿದ್ದರೂ ಅದನ್ನೊ ದ್ದೊಗೆಯುತ್ತಾನೆ:

ಸರಿಯಾ ಸರಿಯೋರು ಸೆರ್‌ಪಗಡಿ ಆಡ್ವಂಗೆ
ತೋಳಾಮ್ಯೆನೆಂತ ಕಲಿಹುಣ್ಣು । ಕೇಳಿದ್ರೆ
ಸತ್ತ್ರ ಬಾಳುವಿಯೋ ತನಗಕ್ಕು ॥

ಗೆಳೆಯರು ಪಗಡೆಯಾಡುವಾಗ, ತೋಳಮೇಲೆಂಥ ಗಾಯ ವೆಂದು ಕೇಳಿದರೆ ತನಗೆ ಸತ್ತಂತಾಗುವುದು. ಸೋತ ಸೋಲಿನ

ನಿಶಾನೆಯನ್ನು ಪ್ರಕಟಿಸುತ್ತ ಬಾಳುವುದು ಅವನಿಗೆ ಹೊಲ್ಲದ್ದು. ಅಭಿಮನ್ಯುವಿನ ಈ ವೀರಾಲಾಪವನ್ನು ಕೇಳಿದ ಕರ್ಣನು,

'ಆಗಮಂಜು ಬಿದ್ದಲ್ಲಿ ಹನ್ನೆಯ್ಡು ಸುತ್ತಿನಕೋಟೆ
ಹನ್ನೆಯ್ಡು ಸುತ್ತೀನ ಅರಮನೆ ।'

ಆಗಲೆಂದು ಹರಸಿ, ಅವನಿಗೆ ಶ್ರದ್ಧಾಂಜಲಿಯನ್ನರ್ಪಿಸು ವುದು ಕರ್ಣನ ಹೃದಯ ವೈಶಾಲ್ಯಕ್ಕೆ ನಿದರ್ಶನವಾಗಿದೆ.

ಇ. ಜಾನಪದ ಮಹಾಭಾರತದಲ್ಲಿ ವ್ಯಾಸಭಾರತದ ಕೃಷ್ಣನು, ನಾರಾಯಣ ದೇವನೆಂಬ ಹೆಸರಿನಲ್ಲಿ ಸುಳಿಯುತ್ತಾನೆ. ಆತ ಕಪಟಿಯೂ ಸ್ವಾರ್ಥಿಯೂ ವಂಚಕನೂ ಆಗಿ ಇಲ್ಲಿ ಚಿತ್ರಿತ ನಾಗಿದ್ದಾನೆ. ಮಹಾಭಾರತದ ಕೃಷ್ಣನು ಕಪಟನಾಟಕ ಸೂತ್ರ ಧಾರಿಯಾದರೂ, ಅವನ ಕಪಟದ ಕಾರ್ಯಕಲಾಪಗಳೆಲ್ಲ ಲೋಕೋದ್ಧಾರಕ್ಕಾಗಿ. ಜಾನಪದ ಮಹಾಭಾರತದಲ್ಲಿಯ ನಾರಾ ಯಣದೇವ ಸ್ವಪ್ರತಿಷ್ಠೆಯ ಬಗ್ಗೆ ಹೆಚ್ಚಿನ ಕಾಳಜಿಯುಳ್ಳವ; ತನ್ನನ್ನು ಯಾರೂ ಮೀರಬಾರದೆಂಬ ಮನೀಷೆಯುಳ್ಳವ. ಪಾಂಡುರಾಜನ ಅಂತ್ಯಕಾಲಕ್ಕೆ ತಂದೆಯ ಆದೇಶದಂತೆ ಪಾಂಡ ವರು ಪಾಂಡುರಾಜನ ಬೆರಳನ್ನು ತಿಂದು ಅಜೇಯರಾಗುವ ಅವಕಾಶವನ್ನು ನಾರಾಯಣದೇವ ತಪ್ಪಿಸುತ್ತಾನೆ.

ಈ. ಪಾಂಡವರು ವನವಾಸಕ್ಕೆ ಹೋಗುವಾಗ, ಭೀಮನು ಒಕ್ಕಲಿಗನ ಕುಂಬ್ರಿಯ ಎಳ್ಳನ್ನು ಕದ್ದು ತಿಂದ ತಪ್ಪಿಗಾಗಿ, ಕುಂತಿಯ ಆದೇಶದಂತೆ ಮೂರು ವರ್ಷ ಒಕ್ಕಲಿಗನ ಮನೆಯಲ್ಲಿ ದುಡಿದು, ಋಣ ತೀರಿಸಲು ಹೋಗುತ್ತಾನೆ. ಆಗ ಭೀಮನು

ಒಕ್ಕಲಿಗನಿಂದ ನೂರೊಂದು ಜಟಗಗಳಿಗೆ ಉಪಹಾರ ಕೊಡುವ ಕಾಯಕವನ್ನು ತೆಗೆದುಕೊಂಡು, ಜಟಗಗಳಿಗೆ 'ಜುಮ್ಮಸ ಗುದಿಗೆ' ಯಿಂದ ಏಟುಕೊಟ್ಟು, ಅವೆಲ್ಲ ಉಪಾಹಾರದ ವಾಸನೆ ಯಿಂದಲೇ ತೃಪ್ತಿಪಟ್ಟುಕೊಳ್ಳುವ ಹಾಗೆ ಮಾಡಿ, ಉಪಾಹಾರ ವನ್ನೆಲ್ಲ ತಾನೇ ಬಕ್ಕರಿಸಿ, ಒಕ್ಕಲಿಗನ ಮನೆಗೆ ಹೋಗಿ, "ಇನ್ನು ಜಟಗಗಳನ್ನು ನೋಡಿಕೊಳ್ಳುವ ಕೆಲಸವಿಲ್ಲ, ಮೂರು ವರ್ಷಗಳ ಕೆಲಸವನ್ನು ಒಂದು ತಾಸಿನಲ್ಲಿ ಮುಗಿಸಿದ್ದೇನೆ" ಎಂದು ಅಲ್ಲಿಂದ ಹೊರಟು ತನ್ನ ಅಣ್ಣ ತಮ್ಮಂದಿರನ್ನು ಕೂಡಿಕೊಳ್ಳು ತ್ತಾನೆ. ಇಂತಹ ಅಪರೂಪದ ಪ್ರಸಂಗಗಳನ್ನು ಜಾನಪದ ಮಹಾಭಾರತದಲ್ಲಿ ಮಾತ್ರ ನೋಡಲು ಸಾಧ್ಯ.

ಉ. ರಾಮಾಯಣದ ಕತೆಯೊಂದರಲ್ಲಿ ಲಕ್ಷ್ಮಣನೇ ರಾಮನಿಗಿಂತ ವೀರನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಈ ಕತೆಯಲ್ಲಿ ಸೀತೆಯನ್ನು ಗೆಲ್ಲುವವನು, ರಾಜ್ಯವನ್ನು ಪಡೆಯುವವನು ಲಕ್ಷ್ಮಣ. ಆತ ತಾನು ಪಡೆದ ರಾಜ್ಯವನ್ನೂ, ಸೀತೆಯನ್ನೂ ಅಣ್ಣನಿಗೊಪ್ಪಿಸುತ್ತಾನೆ. ಮಧ್ಯಭಾರತದ ಗೊಂಡರ ರಾಮಾ ಯಣದಲ್ಲಿ ಲಕ್ಷ್ಮಣ ರಾಮನಿಗಿಂತ ಮೇಲಾಗಿ ಚಿತ್ರಿಸಲ್ಪಟ್ಟಿ ದ್ದನ್ನು ಈ ಸಂದರ್ಭದಲ್ಲಿ ನೆನೆಯಬಹುದು.[೧]

## ೨. ಗಾದೆಗಳು ಮತ್ತು ಒಗಟುಗಳು :

ಮಾನವನ ಸಾಂಸ್ಕೃತಿಕ ಜೀವನದ ಸಾರಭೂತಫಲಗಳಾದ ಗಾದೆಗಳು ಉತ್ತರ ಕನ್ನಡದ ಬುಡಕಟ್ಟು ಜನಾಂಗಗಳಲ್ಲಿ ಹೆಚ್ಚಾಗಿ

---

೧ ಎಚ್. ಎಲ್. ನಾಗೇಗೌಡ: ಗಿರಿಜನ ಪ್ರಪಂಚ (೨ನೇ ಆವೃತ್ತಿ; ೧೯೭೯) ಪು. ೧೦೦ ನೋಡಿರಿ

ಸಿಗುತ್ತಿಲ್ಲ. ಗಾದೆಯೆಂಬ ಪದವೂ ಆವರಲ್ಲಿ ರೂಢಿಯಲ್ಲಿಲ್ಲ; ಅದಕ್ಕೆ ಪರ್ಯಾಯ ಪದಗಳೂ ಸಿಗುತ್ತಿಲ್ಲ. ಒಗಟುಗಳು ಸಹ ಇತರ ವರ್ಗಗಳಲ್ಲಿ ಹೇರಳವಾಗಿ ಸಿಗುವಂತೆ ಇವರಲ್ಲಿ ಸಿಗುತ್ತಿಲ್ಲ. ಬಹುಶಃ ಇದಕ್ಕೆ ಕಾರಣ ಗಾದೆ ಮತ್ತು ಒಗಟುಗಳು ಜಾನಪದ ಬದುಕಿನ ಕೊನೆಯ ಹಂತದಲ್ಲಿ ಸೃಷ್ಟಿಗೊಂಡು, ಅವು ಇವರಿಗೆ ತಲುಪಲು ತಡವಾಗಿರಬಹುದು. ಹೀಗಾಗಿ ಅವುಗಳು ಇವರಲ್ಲಿ ವಿರಲವಾಗಿವೆ. ಇವರ ಗಾದೆ ಮತ್ತು ಒಗಟುಗಳ ಸಂಗ್ರಹ ವನ್ನು ಹೊತ್ತಿಗೆಯ ರೂಪದಲ್ಲಿ ಇದುವರೆಗೆ ಯಾರೂ ತಂದಂತಿಲ್ಲ ಈ ದಿಶೆಯಲ್ಲಿ ನಾನು ಮಾಡಿದ ಪ್ರಯತ್ನವೂ ಫಲಕಾರಿಯಾಗಿಲ್ಲ.

'ಒಗಟು' ಎಂಬ ಪದ, ಬುಡಕಟ್ಟು ಜನಾಂಗದವರಿಗೆ ಹೊಸದು. ಆದಕ್ಕೆ ಪರ್ಯಾಯವಾಗಿ ಅವರು, ಕಣ್ಣು ಕಣಿ, ಸೂಳು ಮುಂತಾದ ಪದಗಳನ್ನು ಬಳಸುತ್ತಾರೆ. ಕಣಿ, ಕಣ್ಣು>ಗಣ್ಣು ಎಂಬ ಪದಗಳಿಗೆ, ಗಂಟು, ಕಟ್ಟು, ಎಂಬ ಅರ್ಥ ಗಳಿವೆ. ಈಗ ಕಟ್ಟು ಎಂಬ ಅರ್ಥವುಳ್ಳ 'ಸೂಡು' ಪದದ ಮೂಲರೂಪ 'ಸೂಪ್' ಎಂದಿರಬೇಕು. ಅದೇ ಸೂಳು>ಸೂಡು ಎಂದಾಗಿರಬೇಕು.[೨] ಒಟ್ಟಿನಲ್ಲಿ ಕಣಿ, ಕಣ್ಣು, ಸೂಳು ಎಂದರೆ ಹೇಳಬೇಕಾದದ್ದನ್ನು, ಮಡಗಿಸಿ, ಗಂಟುಮಾಡಿ, ಕಟ್ಟುಮಾಡಿ ಹೇಳುವುದು. ಎದುರಾಳಿ ಆ ಗಂಟನ್ನು, ಕಟ್ಟನ್ನು ಬಿಡಿಸಿ ರಹಸ್ಯವನ್ನು ಹೊರಗೆಡವಬೇಕು. ಇವರಲ್ಲಿ ಪ್ರಚಲಿತವಿರುವ ಒಗಟುಗಳನ್ನು ಗಮನಿಸಿರಿ :

---

೨ ವಿವರಗಳಿಗೆ ಡಾ. ಎಸ್.ಆರ್. ನಾಯಕ : ಕಾರವಾರ ಜಿಲ್ಲೆಯ ಜಾನಪದ ಗೀತಗಳು (೧೯೮೨) ಪು. ೨೦೦ ನೋಡಿ.

೧. ಬಂಡಿ ತಿರಗ್ತೈತಿ ಬಂಡಾರ ಬೀಳತ್ತೈತಿ (ಬೀಸುಕಲ್ಲು)
೨. ಅಳ್ಯಾನಕ್ಕಿ ಮುಳ್ಯಾಗೆ ಮೊಟ್ಟೆ ಹಾಕ್ತದೆ (ಲಿಂಬೆಹಣ್ಣು)
೩. ನೆತ್ತಿಮ್ಯಾನೆ ಮೂರ್ ಕಣ್ಣು (ತೆಂಗಿನಕಾಯಿ)
೪. ಆಕಾಶದ ಮ್ಯಾನೆ ಅಂಬು ಜೋತಾಡತ್ತೈತಿ (ನುಗ್ಗೇಕಾಯಿ)
೫. ಒಂದು ಮುಂಡಕೆ ಒಂದೇ ಹಾಳೆ (ಬೆರಳು ಮತ್ತು ಉಗುರು)

ಪ್ರಶ್ನೋತ್ತರ ರೂಪದ 'ಸೂಳ್ನುಡಿ'ಯೊಂದನ್ನು ನಿದರ್ಶನಕ್ಕೆ ನೋಡಬಹುದು :

ಒಂದೆಂಬಂತದೇನ್ ಶೆಲುವ
ಅದುವೊಂದರ್ತ ತಳೂದ್ ಹೇಳೀರೋ
ಒಂದೆಂಬಂತದ್ ಕೊಡನ ಕಂಟ
ಎರಡಂಬಂತದೇನ್ ಶೆಲುವ
ಅದುವೊಂದರ್ತ ತಳೂದ್ ಹೇಳೀರೋ
ಎರಡಂಬಂತದ್ ಕಣ್ಣಿನ ಕಂಗಳ
ಮೂರೆಂಬಂತದೇನ್ ಶೆಲುವ
ಅದುವೊಂದರ್ತ ತಳೂದ್ ಹೇಳೀರೋ......

ಎಂದು ಪ್ರಶ್ನೋತ್ತರ ಮುಂದುವರೆಯುತ್ತದೆ.

## ೩ ಉಪಸಂಹಾರ

ಕೃಷಿಯನ್ನೇ ಪ್ರಧಾನ ವೃತ್ತಿಯಾಗಿ ಸ್ವೀಕರಿಸಿದ ಉ. ಕ. ಜಿಲ್ಲೆಯ ಹಾಲಕ್ಕಿ ಒಕ್ಕಲಿಗ ಬುಡಕಟ್ಟು ಜನಾಂಗದವರು ನಾಗರಿಕ ಜೀವನದಿಂದ ಪ್ರಭಾವಿತರಾಗುತ್ತಿದ್ದಾರೆ. ಬದಲಾಗುತ್ತಿರುವ ಇಂದಿನ ಜೀವನ ಮೌಲ್ಯ, ನಗರೀಕರಣ, ಔದ್ಯೋಗೀಕರಣದ ಗಾಳಿಯಿಂದ ಇವರು ಇಂದು ಜಾತಿಗಳಾಗಿ ಪರಿವರ್ತನೆಗೊಳ್ಳುತ್ತ, ತಮ್ಮ ಬುಡಕಟ್ಟಿನ ಮೂಲ ಸ್ವರೂಪವನ್ನು ಕಳೆದುಕೊಳ್ಳತೊಡಗಿದ್ದಾರೆ. ಆದರೂ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಇವರು ಇನ್ನೂ ತೀರ ಹಿಂದುಳಿದಿದ್ದಾರೆ. ಇವರ ಪರಿಸರ ಸಮಸ್ಯೆ ಮತ್ತು ಆಶಯಗಳಿಗನುಗುಣವಾಗಿ ಯೋಜನೆಗಳನ್ನು ರೂಪಿಸಿ, ಇವರ ಸರ್ವತೋಮುಖ, ಅಭಿವೃದ್ಧಿಯ ಕಡೆಗೆತುರ್ತಿನ ಕ್ರಮ ಕೈಕೊಳ್ಳುವ ಅಗತ್ಯವಿದೆ. ಇದರ ಜೊತೆಗೇ ಅವರ ಅಪಾರವಾದ ಜಾನಪದ ಸಂಪತ್ತು, ಸುಧಾರಣೆಯ ತರಾತುರಿಯಲ್ಲಿ ಮೂಲೆಗುಂಪಾಗದಂತೆ ಎಚ್ಚರಿಕೆಯನ್ನೂ ವಹಿಸಬೇಕಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಜಾನಪದಕ್ಕೆ ಇವರ ಕೊಡುಗೆ ದೊಡ್ಡದು. ಆದರೂ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಇದುವರೆಗೆ ಇಲ್ಲಿಯ ಬುಡಕಟ್ಟು ಜನಾಂಗಕ್ಕೆ ಸೇರಿದ ಯಾವ ಕಲಾವಿದನಿಗೂ ಮಾಸಾಶನ ಸಿಗದಿರುವುದು ಆಶ್ಚರ್ಯಕರ ಸಂಗತಿ. ಉಳಿದ ಕ್ಷೇತ್ರಗಳಲ್ಲಿ ಮೇಲ್ವರ್ಗದವರು, ತಿಳಿದವರಂತೆ ಪೋಜುಮಾಡುವವರು, ರಾಜಕೀಯ ಮಾಡಿ,

ಮಾಸಾಶನ, ಬಹುಮಾನಗಳನ್ನು ಗಿಟ್ಟಿಸುವಂತೆ ಈ ಕ್ಷೇತ್ರ ದಲ್ಲಿಯೂ ಗಿಟ್ಟಿಸುತ್ತಿರುವುದು ವಿಷಾದನೀಯ ಸಂಗತಿ. ಈ ದಿಶೆಯಲ್ಲಿ ಉಡಾಫೆಯಿಂದ ಮುಂದುವರಿಯುವ ಸ್ವಭಾವ ದವರು ಇವರಲ್ಲವಾದುದರಿಂದ, ಜಾನಪದ ತಜ್ಞರು ಈ ಜನಾಂಗ ಗಳಿಗಾಗುವ ಅನ್ಯಾಯವನ್ನು ತಡೆಯಲು ಮುತುವರ್ಜಿ ವಹಿಸ ಬೇಕೆಂದು ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇನೆ.

ಬುಡಕಟ್ಟು ಜನಾಂಗಗಳ ಅಧ್ಯಯನಕ್ಕೆ ನನ್ನ ಉಪನ್ಯಾಸ ಒಂದು ಚಿಕ್ಕ ಪೀಠಿಕೆ. ಇಲ್ಲಿ ಪ್ರಸ್ತಾಪಿಸಿದ ವಿವಿಧ ಬುಡಕಟ್ಟು ಗಳ ತೌಲನಿಕ ಅಧ್ಯಯನವನ್ನು ಇನ್ನೂ ಆಳವಾಗಿ ಮಾಡಿದಲ್ಲಿ ಬುಡಕಟ್ಟು ಜನಾಂಗಗಳ ವಿಷಯದಲ್ಲಿ ಇನ್ನೂ ಅನೇಕ ಮಹತ್ವ ಪೂರ್ಣ ಹೊಸ ಅಂಶಗಳು ಹೊರಡಬಹುದು. ಈ ಕೆಲಸ ವನ್ನು ಇತರ ಸಂಶೋಧಕರು ಕೈಗೆತ್ತಿಕೊಂಡು, ಈ ಜಿಲ್ಲೆಯ ಜಾನಪದ ಲೋಕದ ಹೊಸ ಗವಾಕ್ಷವೊಂದನ್ನು ತೆರೆಯಲೆಂದು ಹಾರೈಸುತ್ತೇನೆ.

## ಗ್ರಂಥಋಣ

೧. ಎನ್. ಆರ್. ನಾಯಕ, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ೧೯೮೨. ಪು. ೩೬ + ೨೯೫.

೨. ಎನ್. ಆರ್. ನಾಯಕ, ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ೧೯೮೨ ಪು. VI + ೬೦.

೩. ಎನ್. ಆರ್. ನಾಯಕ, ಹೇಳುತೇವೋ ಗುಮ್ಮ್ಟ ಪದ ನಾವಾ, ಜಾನಪದ ಪ್ರಕಾಶನ, ಹೊನ್ನಾವರ: ೧೯೮೨, ಪು. ೩೬ + ೧೨೫.
೪. ಎನ್. ಆರ್. ನಾಯಕ, ಜಾನಪದ ಸಿಂಹಾವಲೋಕನ, ಜಾನಪದ ಪ್ರಕಾಶನ, ಹೊನ್ನಾವರ: ೧೯೮೫, ಪುಟ IV + ೧೨೬.
೫. ಎನ್. ಆರ್. ನಾಯಕ, ಕೂಸಾಯ್ತು ನಮ್ಮ ಕೊಮರಾಗೆ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ೧೯೮೩ ಪು. IV + ೪೫ + ೪೩೦.
೬. ಎನ್. ಆರ್. ನಾಯಕ, ಸುಗ್ಗಿಯ ಪದಗಳು, ಜಾನಪದ ಪ್ರಕಾಶನ, ಹೊನ್ನಾವರ: ೧೯೮೬, ಪು. ೩೬ + ೭೬.
೭. ಎಲ್. ಆರ್. ಹೆಗಡೆ, ತಿಮ್ಮಕ್ಕನ ಪದಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು: ೧೯೬೯ ಪು. ೮೩ + ೧೫೭.
೮. ಎಲ್. ಆರ್. ಹೆಗಡೆ, ಗೊಂಡರ ಪದಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೭೭, ಪು. ೧೨೮ + ೧೩.
೯. ಶಾಂತಿ ನಾಯಕ, ಕಾಗಕ್ಕ ಗುಬ್ಬಕ್ಕ ಜಾನಪದ ಪ್ರಕಾಶನ, ಹೊನ್ನಾವರ: ೧೯೮೬, ಪು. ೩ + ೬೫.
೧೦. ಎಚ್. ಎಲ್. ನಾಗೇಗೌಡ, ಗಿರಿಜನ ಪ್ರಪಂಚ (೨ನೇ ಆವೃತ್ತಿ) ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು, ೧೯೭೯ ಪು. xxiv + ೨೪೮.
11. Dr. F. Buchanan, Journey through the Northern parts of Kanara Published by Nagarika Printers & Publishers Ltd.
12. Gazetteer of Bombay Presidency vol. xiv Part I, II (1984) by James Campbell

# ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧. ವೇದಕಾಲದ ವಿವಾಹಗಳು

—ವಿದ್ವಾನ್ ಸಾಂಬದೀಕ್ಷಿತ

೨. ಶಿರಾಲಿಯ ಗೊಂಡರು

—ನಾರಾಯಣ ಯಾಜಿ

೩. ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ

—ಎಸ್. ಕೆ. ಕಡೆತೋಟದ

೪. ಹಾಲಕ್ಕಿ ಒಕ್ಕಲಿಗರ ಜನಪದ ಗೀತ

ಎನ್. ಆರ್. ನಾಯಕ

೫. ಕನ್ನಡ ಜನಪದ ಸಾಹಿತ್ಯದಲ್ಲಿ ಮದುವೆ

—ಎಲ್. ಆರ್. ಹೆಗಡೆ

೬. ಹಂತಿಯ ಪದಗಳ ಸೊಗಸು

—ಎಸ್. ಆರ್. ಗೌಡರ

೭. ದ್ರಾವಿಡ ಜನಾಂಗ

—ಸಂಗಮೇಶ ಡಿ. ಸವದತ್ತಿಮಠ

೮. ಜನಪದ ಹಾಗೂ ಸಮಾಜ ಕಾರ್ಯ

—ಎಸ್. ಎಫ್. ಪೂಜಾರ

೯. ಕನ್ನಡ ಜನಪದ ಕಾವ್ಯದಲ್ಲಿ ಭಕ್ತಿಯ ನಿರೂಪಣೆ

—ಬಸವರಾಜ ಮಲಶೆಟ್ಟಿ

೧೦. ಬದಲಾಗುತ್ತಿರುವ ಭಾರತೀಯ ಗ್ರಾಮ

—ಎಚ್. ವ್ಹಿ. ನಾಗೇಶ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ